# CIVICS
&
# ADMINISTRATION





**A Kannada Key**

( New Syllabus Edition )



By

Harish Rao,
Kidiyur.

First Print :
2000 Copies.
January 1952.



One finds life a tragedy
Another feels it a comedy
— But remember —
The path of duty is the way to glory

*To.*

My dear readers.

*H. R. K.*





Printed By : BHARAT PRESS, DHARWAR.

# ★ FOREWORD.

Civics & Administration is not a easy subject either to study or to teach. It may become a burden instead of a joy. we may be so busy insisting on its importance that we forgot to explain its fascination. It is also very defficult to study subjects without good books. In this case mr. Rao has performed a very useful service by writing this key, careful manual on civics & Adm....in Kannada.

This key treated with so many important hints & thoughts also it deals with English—Kannada Questions & Answers, model papers & hints for study etc....Thus I hope the book has been well received by the students and the teachers of this subject. Well, as you shall see for your self !

**"Our culture is what we are, and our civilization is what we use........"**

"Banumandir"
Belgaum.
January 1952

R. S. Chikmath
M.A., LL.B.
Professor of Civics

## ★ MY WORD.

This book is an attempt to clossify the various phases of Civics & Adm. There are so many reasonably good books on this subject in all languages, that it may be asked, " Why it has been thought necessary to produce one more?" The answer must be that, you cannot find so much ignorance, loose thought and loose writing on this subject in Kannada. So I have ventured to put my pen to paper, partly because the principle that " Half a loaf is better than no bread " And partly for my interest in the Subject

This is written for students of all classes, I mean that this attempt may prove really useful to them.

Here I express my obligation to the authors, whose ideas have proved a source of information to me. Specially my thanks to prof. Chiknad; And sri. Balaswami ( Editor of " Nagarika Tamil weekly, Madras ) and the Publishers who helped me in many ways to puplish the first print. As I dedicate this book to you. **Well, good luck friends !**

Mysore. H. R. K

I st Jan. 1952.

# ಮಹತ್ವದ ಸೂಚನೆ.

ದಯವಿಟ್ಟು ಈ ಕೈಪಿಡಿಯ ಅಭ್ಯಾಸಕ್ಕೆ ತೊಡಗುವ ಮೊದಲು ಕೆಳಗೆ ಸೂಚಿಸಿದ ತಿದ್ದುಪಡಿಗಳನ್ನು ಆಯಾ ಸ್ಥಳಗಳಲ್ಲಿ ತಿದ್ದಿ ಬರೆದುಕೊಳ್ಳ ಬೇಕಾಗಿ ಕಳಕಳಿಯ ವಿನಂತಿ. ತೊಂದರೆಗೆ ಕ್ಷಮೆ ಇರಲಿ.

| ಪುಟ. | ಸಾಲು. | ತಪ್ಪು. | ಒಪ್ಪು. |
|---|---|---|---|
| Foreword. | ೨ | not a | not an |
| Myword. | ೨ | clossify | classify |
| ,, | ೧೦ | because the | because of the |
| 6 | ೧೪ | ಎಕ | ಏಕ |
| 6 | ೧೬ | ಕೊಟ್ಟು | ಕೊಟ್ಟು |
| 7 | ೧೫ | ಮಾತ | ಮಾತ್ರ |
| 13 | ೨೩ | ಕಡೆಯು | ಕಡೆಯು |
| 13 | ೨೪ | citizn ship | citizen ship |
| 13 | ೨೪ | lost ? | be lost ? |
| 14 | ೩೦ | ನಾ ನಲ್ಲಿ | ನಾಡಿನಲ್ಲಿ |
| 15 | ಕೊನೆಸಾಲು | ಸಾಗವಾಗ ಬಹುದು | ಸಾಗಬಹುದು. |
| 20 | ೯ | ಸಾಗುತ್ತಿ ಲಿಲ್ಲ | ಸಾಗುತ್ತಿರಲಿಲ್ಲ. |
| 22 | ೫ | Demacracy | Democracy |
| 22 | ಕೊನೆಯ ಪ್ಯಾರಾ ( ಪ್ರಜೆಗಳು....... ಮಹತ್ವವಿದೆ – ಎಂಬಷ್ಟನ್ನು ) ಅಗತ್ಯ ಬಿಟ್ಟು ಓದಬೇಕು. | | |
| 24 | ೧೦ | Unitory | Unitary |
| 28 | ೨ | yow | you |
| 29 | ಕೊನೆಸಾಲು | ಆರಿಸಿಕೊಂಡು | ಚುನಾಯಿಸಿಕೊಂಡು |
| 31 | ೯ | ವಾಪಾರ | ವ್ಯಾಪಾರ |
| 39 | ೨೫ | ಸರಕಾರಕಾರ | ಸರಕಾರ |
| 43 | ೧೫ | ಮ್ಯೋಜಿಸ್ಟ್ರೇಟ | ಮ್ಯಾಜಿಸ್ಟ್ರೇಟ |
| 50 | ೧೪ | ಮಂತಿ | ಮಂತ್ರಿ |

| | | | |
|---|---|---|---|
| 51 | ೩ | ಕಾರ್ಯ ಇರುವ್ವದು | ಕಾಯಂ ಇ. |
| 56 | ೧೬ | ಅಧಿಪ್ರಾಯ | ಅಭಿಪ್ರಾಯ |
| 61 | ೨ | ಕಾಯಿಧಾಯಕ | ಕಾರ್ಯವಿಧಾಯಕ |
| 65 | ೧೬ | Magistrate | Courts |
| 65 | ೨೨ | words | wards |
| 66 | ಕೊನೆಸಾಲು | ವರ್ತಿಸಿದಲ್ಲಿ | ವತಿಸದಿದ್ದಲ್ಲಿ |
| 67 | ೪ | ಆಕ್ಷೇಪ | ಆಕ್ಷೇಪಿ |
| 67 | ೫ | ಕ್ಷಕ್ಕಿಂ ಹೆಚ್ಚು | ಕ್ಕಿಂತ ಹೆಚ್ಚು |
| 67 | ೧೩ | Administeative- | Administrative |
| 67 | ಕೊನೆಯಸಾಲು | ಆಸ್ಟೈ | ಅಸ್ಟೈ |
| 69 | ೪ | ನಾಯಾಲಯ | ನ್ಯಾಯಾಲಯ |
| 69 | ೨೨ | there | thoir |
| 70 | ೪ | ಅಧಿಕಾರ | ಅಧೀನ |
| 70 | ೨೧ | ಸೀಮಕ | ನೇಮಕ |
| 70 | ಕೊನೆ ಸಾಲು | ಅಧೀನನಾತದ್ದು | ಅಧೀನನಾಗಿದ್ದು |
| 71 | ೫ | Residuory | Residuary. |
| 71 | ೭ | ಪಟ್ಟಿಯೆಯಲ್ಲಿ | ಪಟ್ಟಿಯಲ್ಲಿ |
| 71 | ೨೫ | ಕೋಲಿನ | ಮೇಲಿನ |
| General hints | ೯ | Discribe | Describo |
| Model Questions No. | 11 | Cantral | Central |
| ,, ,, | 26 | Centrel | Central |
| ,, ,, | 38 | Importence | Importance |
| ,, ,, | 40 (9) | Indircet | Indireot |
| ,, ,, | ,, ,, | diroet | direct |
| ,, ,, | 41 (1) | impiy | imply |

## ★ ಮೊದಲ ವಿಭಾಗ
## ★ ಪೌರನೀತಿ.

### 1. Define Civics ಪೌರನೀತಿಯ ಅರ್ಥ ವಿವರಿಸಿರಿ.

ಪೌರನೀತಿಯೂ ಒಂದು ವಿಧದ ಸಮಾಜ ಶಾಸ್ತ್ರವಾಗಿದೆ. ಅದು ನಾಗರಿಕತೆಯ ಲಕ್ಷಣಗಳನ್ನು ಕಲಿಸುವ, ವ್ಯಕ್ತಿ ವ್ಯಕ್ತಿಗಳ ಹಾಗೂ ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧವನ್ನು ವಿವರಿಸುವ, ಮತ್ತು ಮಾನವನ ಜೀವನವನ್ನು ಉಚ್ಚ ಗುರಿಗೆ ಮುಟ್ಟಿಸುವ 'ಸಾಧನೆ' ಯಾಗಿದೆ. ಧಾರ್ಮಿಕ, ರಾಜಕೀಯ, ಸಾಮಾಜಿಕ, ದೈಹಿಕ ಚಟುವಟಿಕೆಗಳ ವರದಿಯಾಗಿದೆ. ಲ್ಯಾಟಿನ್ ಭಾಷೆಯ Civitas ( ಪಟ್ಟಣ ) ಅಥವಾ Civis ( ನಾಗರಿಕ ) ಎಂಬ ಶಬ್ದಗಳಿಂದ Civics ಶಬ್ದ ಹುಟ್ಟಿದೆ ಎಂದು ತರ್ಕಿಸಿದೆ. ಆದ್ದರಿಂದ ಅದು ನಾಗರಿಕತೆಯ ಪುರಾಣವೆನ್ನಬಹುದು.

### 2. What is its Importance in Life ? ಜೀವನದಲ್ಲಿ ಪೌರನೀತಿಯ ಪ್ರಾಮುಖ್ಯತೆಯೇನು ?

ಅದು ಸಮಾಜದ ಕೊಳೆಯನ್ನು ಕಳೆದು, ವಿಚಾರಶಕ್ತಿ, ಉಚ್ಚ ಭಾವನೆ, ಲಕ್ಷಣಗಳನ್ನು ಬೆಳೆಸಿ ದೇಶದ ಏಳಿಗೆಗಾಗಿಯೂ ಪರರ ಹಿತಕ್ಕಾಗಿಯೂ ದುಡಿಯುವಂತೆ ಪ್ರೇರೇಪಿಸಿ ಮಾನವನಿಗೆ ಅವನ ಸಾಮಾಜಿಕ ಗುರಿಯ ಅರಿವು ಮಾಡಿಸಿ ನೈಜ ನಾಗರಿಕತೆಯ ಲಕ್ಷಣಗಳನ್ನು ಕಲಿಸುವದು. ಪೌರನೀತಿ ನಾಗರಿಕತೆಯ ಶಿಕ್ಷಣವಾಗಿದೆ.

### 3. Which and how other sciences related with civics? ಪೌರನೀತಿಗೆ ಬೇರಾವ ಶಾಸ್ತ್ರಗಳು ಹೇಗೆ ಸಂಬಂಧಿಸಿವೆ ?

**೧ ನೀತಿ ಶಾಸ್ತ್ರ** ( Ethics ) ಇದು ನೀತಿಯ ಜೀವನವನ್ನು ಹೇಳುವುದರಿಂದ ನಾಗರಿಕ ನೀತಿಗೆ ಬಹಳ ಸಂಬಂಧಿಸಿದೆ.

೨ ಇತಿಹಾಸ ( History ) ಹಿಂದಿನ ಕಾಲದ ಜನಜೀವನವನ್ನೂ ಘಟನೆಗಳನ್ನೂ ಹೇಳುವುದರಿಂದ ಕಾಲಮಾನಕ್ಕನುಗುಣವಾಗಿ ಸುಧಾರಣೆ ಮಾಡಿಕೊಂಡು ಹೋಗಲು ಸಹಾಯವಾಗುತ್ತದೆ.

೩ **ಮನ ಶಾಸ್ತ್ರ** ( Psychology ) ವ್ಯಕ್ತಿಯ ಮನೋಭಾವದ ಪಾಠವಿದ್ದು ಇದು ಪೌರನೀತಿಗೆ ಕೂಡಿರುವುದರಿಂದ ನಾಗರಿಕನ ಮನೋಭಾವವನ್ನು ಸುಧಾರಿಸಲೂ, ಬೆಳೆಸಲೂ ಸಹಕಾರಿಯಾಗಿದೆ.

೪ **ಅರ್ಥ ಶಾಸ್ತ್ರ** ( Economics ) ಇದರಿಂದ ಆಯವ್ಯಯದ ಮಾಹಿತಿಯೂ; ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಬಗ್ಗೆಯೂ ಸಿಗಬಹುದಾದ ಜ್ಞಾನವು ನಾಗರಿಕನಿಗೆ ಅವಶ್ಯ ಬೇಕು.

೫ **ರಾಜನೀತಿ ಶಾಸ್ತ್ರ** ( Politics ) ವಿವಿಧ ರಾಜ್ಯಗಳ ಕಾರ್ಯಭಾರದ ವಿಮರ್ಶೆ-ಪರಿಣಾಮಗಳನ್ನು ನಾವಿದರಿಂದ ತಿಳಿಯಬಹುದು. ಇದರಿಂದ ಪರಿಸ್ಥಿತಿಗನುಗುಣವಾಗಿ ಎಂತಹ ಕಾರಭಾರವಿರಬೇಕೆಂಬ ಕುರಿತು ವಿಚಾರಿಸಲು ಸಹಾಯವಾಗುತ್ತದೆ.

೬ **ಸಮಾಜಶಾಸ್ತ್ರ** ( Sociology ) ಪೌರನೀತಿಯು ಬಹು ಅಂಶ ಇದರ ಮೇಲೆಯೇ ಆದರಿಸಿ ರಚಿತವಾಗಿದೆ.

ಹೀಗೆ ಪೌರನೀತಿಯು ಎಲ್ಲ ಸಾಮಾಜಿಕ ಶಾಸ್ತ್ರಗಳಲ್ಲೂ ಒಂದಲ್ಲ ಒಂದು ವಿಧದಿಂದ ನಿಕಟ ಸಂಬಂಧವುಳ್ಳದ್ದಾಗಿದೆ.

## 4. Give the method of study of civics
## ಪೌರನೀತಿಯ ಅಭ್ಯಾಸ ಕ್ರಮವನ್ನು ಹೇಳಿರಿ.

ಸುತ್ತು ಮುತ್ತಲಿನ ಸಮಾಜ ಜೀವನ, ವ್ಯವಹಾರಗಳನ್ನು ಪರಿಶೀಲಿಸುತ್ತ, ವಿಮರ್ಶಿಸಿ ಅವಶ್ಯ ಸಂಗತಿಗಳನ್ನು ಸಂಗ್ರಹಿಸುತ್ತ, ಆದಲುಬದಲಾಗುತ್ತಿರುವ ಮಾನವನ ಶೀಲ ನಡತೆ ಪರಿಸ್ಥಿತಿಗಳನ್ನವಲೋಕಿಸುತ್ತ ಸರಕಾರದ ಶಾಸನಗಳನ್ನು ಅರಿತುಕೊಂಡು ಪೌರನೀತಿಯ ಅಭ್ಯಾಸವಾಗುವುದು. ಓದಿ ತಿಳಿದುಕೊಳ್ಳುವುದಕ್ಕಿಂತಲೂ ಕೇಳಿ, ನೋಡಿ ತಿಳಿಯುವುದೇ ಬಹಳ. ಅರಿತವರ, ಹಿರಿಯರ ಮತ್ತು ಸಮಾಜದಿಂದ ಪೌರನೀತಿಯ ಲಕ್ಷಣಗಳನ್ನು ನಾವು ತಿಳಿದುಕೊಳ್ಳುತ್ತೇವೆ.

## 5. What is Family? Describe its functions.
## ಕುಟುಂಬವೆಂದರೇನು ? ಅದರ ಕಾರ್ಯಗಳನ್ನು ವಿವರಿಸಿರಿ.

ಗಂಡ ಹೆಂಡತಿ, ಮಕ್ಕಳು ಮರಿಗಳು, ಆಪ್ತೇಷ್ಟರು ಎಲ್ಲರೂ ಕೂಡಿಕೊಂಡು ಜೀವನ ಸಾಗಿಸುವುದು. ಈ ಒಂದು ಸಂಸಾರಕ್ಕೆ ಕುಟುಂಬವೆನ್ನುವರು.

ಕುಟುಂಬದಿಂದ ಪ್ರಜೋತ್ಪಾದಕ ಕ್ರಿಯೆ ನಿರಂತರವಾಗಿ ಸಾಗುವುದು. ಗಂಡು ಹೆಣ್ಣುಗಳು ಜೀವನದಲ್ಲಿ ಪರಸ್ಪರ ಸಹಕಾರಿಗಳಾಗಿ ಮಾನಸಿಕ ವಿಕಾಸವಾಗುವದು. ಭಾಷೆ, ಸಂಸ್ಕೃತಿ ನೀತಿಗಳನ್ನು ಕಲಿಸುವುದು ಮತ್ತು ಬೆಳೆಸುವದು. ಕಿರಿಯರಿಗೆ, ಅಸಹಾಯಕರಿಗೆ, ಅಂಗಹೀನರಿಗೆ, ಮುದಿಯರಿಗೆ ಕುಟುಂಬವು ಆಧಾರ ಕೊಡುವುದಲ್ಲದೆ ಇದು ನಾಗರಿಕತೆಯ ಶಿಕ್ಷಣದ ಮೊದಲ ಶಾಲೆಯೆನ್ನಬಹುದು.

ಅಂತೂ ಮಾನವನು ಉಚ್ಚನೆನಿಸಿಕೊಂಡು ತನ್ನ ಕರ್ತವ್ಯವನ್ನು ಸಾಧಿಸಲು ಅವನೊಂದು ಯೋಗ್ಯ ಕುಟುಂಬದಲ್ಲಿ ಹೊಂದಿಕೊಂಡಿರಲೇಬೇಕಾಗುತ್ತದೆ.

## 6. Explain the future of the family. Is it possible to get happiness from it?
## ಕುಟುಂಬದ ಭವಿತವ್ಯವನ್ನು ವಿವರಿಸಿ ಅದರಿಂದ ಸುಖ ಪಡೆಯುವುದು ಸಾಧ್ಯವಿದೆಯೆ?

ಕುಟುಂಬ ಸುಖ ಪಡೆಯಬೇಕಾದರೆ ಸಾಮರಸ್ಯ, ಸಂಗತ್ಯ, ಸ್ತ್ರೀ ಪುರುಷರಲ್ಲಿ ಸಮಾನತೆ, ಸ್ನೇಹಪ್ರೇಮ, ಪೋಷಣೆಗೆ ಸಾಕಷ್ಟು ಅನುಕೂಲ ಸ್ಥಿತಿ. ನಾಗರಿಕತೆಯ ಶಿಕ್ಷಣ—ಮೊದಲಾದವುಗಳ ಅವಶ್ಯಕತೆಯಿದೆ. ಇಲ್ಲದಿದ್ದರೆ ಸಂಸಾರವು ಸುಖದಾರಿಯಲ್ಲಿ ಸಾಗುವುದೆಂದು ಹೇಳಲಾಗದು. ಅಥವಾ ಈ ಅನುಕೂಲತೆಗಳನ್ನು ಸರಕಾರವಾಗಲಿ ಸಂಬಂಧಿಸಿದ ಸಂಸ್ಥೆಗಳಾಗಲಿ ಒದಗಿಸಿಕೊಡಬೇಕು. ಕುಟುಂಬ ಜೀವನಕ್ಕೆ ಎಂತಹ ಆಘಾತಗಳು ಬಂದರೂ ಅದು ಉಳಿದುಕೊಳ್ಳಬಹುದು. ಆದರೆ ಈಗಿನ ಪರಿಸ್ಥಿತಿಗನು

ಗುಣವಾಗಿ ಅನೇಕ ಸುಧಾರಣೆ ಮಾಡುವುದು ಅವಶ್ಯವಿದೆ. ಇಲ್ಲದಿದ್ದರೆ ಭವಿಷ್ಯ ಕುಟುಂಬಕ್ಕೆ ಅನೇಕ ವಿಧದ ಪಿಡುಗು ಬಡಿಯಬಹುದು.

7. Write a note on "The family in the modern world." ಆಧುನಿಕ ಜಗತ್ತಿನ ಕುಟುಂಬದ ಬಗೆಗೆ ಟಿಪ್ಪಣಿ ಬರೆಯಿರಿ.

ಈಗ ಹಳೆಯ ಮತ್ತು ನೂತನ ಸಂಸ್ಕೃತಿಗಳ ನಡುವೆ ತಿಕ್ಕಾಟ ಹುಟ್ಟಿ ಒಮ್ಮತವಿರದೆ, ಹಿರಿಕಿರಿಯರಲ್ಲಿ, ಶಿಕ್ಷಿತ ಅಶಿಕ್ಷಿತರಲ್ಲಿ ಮತಭೇದ ಹುಟ್ಟಿದೆ. ಶಿಕ್ಷಿತ ಹೆಣ್ಮಕ್ಕಳೂ "ತಮ್ಮ ಹಕ್ಕುಗಳು" ಎಂದು ಕಾದುತ್ತಿದ್ದಾರೆ. ಸರಕಾರವಾದರೂ ವಿನಾಕಾರಣ ಕೌಟುಂಬಿಕ ಸಮಸ್ಯೆಗಳಿಗೆ ಕೈ ಹಾಕುತ್ತಿದೆ. ಅಂತೂ ಅವಿಭಕ್ತ ಕುಟುಂಬದಲ್ಲಿ ಶಾಂತಿ ಇಲ್ಲವೆಂದು ಕುಟುಂಬದಲ್ಲಿ ವಿಭಜನೆಗೆ ಆರಂಭವಾಗಿದೆ. ಸ್ವಾರ್ಥವು ನೆಲೆಗೊಂಡಿದೆ ಇಂತಹ ಪರಿಸ್ಥಿತಿಯಲ್ಲಿ ಬೆಳೆಯುವ ಮಗುವಾದರೂ ಮುಂದೆ ಉತ್ತಮ ನಾಗರಿಕನಾಗಬಹುದೆನ್ನಲು ಸಾಧ್ಯವಿಲ್ಲ.

8 What is Joint Family? Explain its advantages. why is it disintegrating? Give its future. ಸಂಯುಕ್ತ ಕುಟುಂಬವೆಂದರೇನು? ಅದರ ಗುಣ ವಿವರಿಸಿರಿ. ಅದು ವಿಭಕ್ತವಾಗುತ್ತಿರಲು ಕಾರಣಗಳೇನು? ಅದರ ಭವಿತವ್ಯವೇನು?

ಇದರಲ್ಲಿ ಹೆತ್ತವರು ಮಕ್ಕಳು, ಇನ್ನಿತರ ಆಪ್ತೇಷ್ಟರು ಒಟ್ಟಾಗಿ ವಾಸಿಸುವರು. ಎಲ್ಲ ಆ ಮುಮ್ಯ ಯದ ನಿರೀಕ್ಷಣೆ, ಜವಾಬ್ದಾರಿ, ವ್ಯವಹಾರಗಳಿಗಾಗಿ ಹಿರಿಯನಾದವನೊಬ್ಬ ಯಜಮಾನನಿರುತ್ತಾನೆ. ಶ್ರಮ ವಿಭಾಗ ತತ್ವವನ್ನಿದು ಅನುಸರಿಸುತ್ತದೆ.

**ಗುಣ**:– ಇದರಿಂದ ಪರಸ್ಪರ ಕುಟುಂಬದ ಜನರಿಗೆ ಸಹಕಾರ ದೊರೆಯುತ್ತದೆ. ವ್ಯಯವು ಕಡಿಮೆಯಾಗಿ, ಬಲವಿರುತ್ತದೆ. ಹಿರಿಯರಿಂದ, ಹಿರಿಯರಿಂದ ಕಿರಿಯರು ಜ್ಞಾನದರ್ಶನ ಪಡೆಯುವರು. ಅನಾಥರಿಗೆ, ಅಂಗ ಹೀನರಿಗೆ, ರೋಗಿಗಳಿಗೆ ಸಹಕಾರ ದೊರೆಯುತ್ತದೆ. ವಿವಿಧ ಜ್ಞಾನ

ಭಾವನೆಗಳ ಜನರ ನಡುವೆ ಬೆಳೆಯುವವನು ಉತ್ತಮ ನಾಗರಿಕನೆನಿಸಿ ಕೊಳ್ಳುವನು.

**ವಿಭಜನೆ :–** ಆದರೆ ಇಂತಹ ಕುಟುಂಬಗಳೀಗ ವಿಭಜನೆಯಾಗುತ್ತಿವೆ. ವಿನಾಕಾರಣ ಜಗಳಾಟ, ವೈಮನಸ್ಸು ಹುಟ್ಟಿಕೊಂಡು ಮತ ಭೇದವಾಗ ತೊಡಗಿದೆ. ಎಲ್ಲರ ಮನೋಭಾವ, ಹೃದಯ ಒಂದೇಯಾಗಿರುತ್ತದೆಯೆ? ಹಿರಿಕಿರಿಯರೊಳಗೆ, ಮನೆಯ ಹೆಮ್ಮಕ್ಕಳೊಳಗೆ, ಪ್ರಾಚೀನ–ಆಧುನಿಕ ಸಂಸ್ಕೃತಿಗಳೊಳಗೆ ತಿಕ್ಕಾಟ ಹುಟ್ಟಹತ್ತಿದೆ. ವ್ಯಕ್ತಿಯ ದೈಹಿಕ ಮಾನಸಿಕ ಬೆಳವಣಿಗೆಗೆ ತಡೆಯಾಗಿ ಒಂದೇ ಅಚ್ಚಿನಲ್ಲಿ ಎಲ್ಲರನ್ನೂ ಹಾಕಿ ತೆಗೆದಂತೆ ಸ್ವಾತಂತ್ರ್ಯ ದೊರೆಯದು. ದೊಡ್ಡ ಪಟ್ಟಣಗಳಲ್ಲಿ ಸ್ಥಳಾಭಾವದಿಂದಲೂ ದೊಡ್ಡ ಕುಟುಂಬಗಳು ವಿಭಜನೆಗೆ ತೊಡಗಿವೆ. ಹೆಚ್ಚು ಗಳಿಸುವವರು, ಕಡಿಮೆ ಗಳಿಸುವವರು, ಸಮತಾಭಾವದಲ್ಲಿ ಹೋಗುವುದು ಸಾಧ್ಯವಿಲ್ಲ. ಈಗಿನ ನಿರುದ್ಯೋಗ ಮತ್ತು ಆಹಾರ ಪರಿಸ್ಥಿತಿಯಾದರೂ ಸಂಯುಕ್ತ ಕುಟುಂಬದ ಮೇಲೆ ಕೆಟ್ಟ ಪರಿಣಾಮ ಮಾಡುತ್ತಿದೆ.

**ಭವಿತವ್ಯ :–** ಹೀಗೆ ರಾಜಕೀಯ, ಸಾಮಾಜಿಕ ಬದಲಾವಣೆ, ಪರಿಸ್ಥಿತಿಗಳಿಂದ, ಆಧುನಿಕ ಶಿಕ್ಷಣದಿಂದ, ಸಮಾಜದಲ್ಲಿಯ ಮತಭೇದದಿಂದ ಅವಿಭಕ್ತ ಕುಟುಂಬಗಳು ನಾಶದ ದಾರಿ ಹಿಡಿಯುತ್ತಿ ಅಲ್ಪ ಸಮಯದಲ್ಲಿ ಅವು ಪೂರ್ಣ ಅಳಿಯಲೂ ಬಹುದು.

## 9. How many types are there in Family?
## ಕುಟುಂಬವಲ್ಲಿರುವ ಪ್ರಭೇದಗಳಾವವು?

ಪಿತೃ ಪ್ರಧಾನ ಮತ್ತು ಮಾತೃ ಪ್ರಧಾನವೆಂಬೆರಡುವಿಧ.

೧ **ಪಿತೃಪ್ರಧಾನ** ( Patriarchal ) ಈ ತೆರನಾದ ಕುಟುಂಬ ಪದ್ಧತಿಯಲ್ಲಿ ತಂದೆಯಾದವನೇ ಧನಿಯು. ಎಲ್ಲ ಹಕ್ಕುಗಳಿಗೆ ಬಾಧ್ಯನು. ಉಳಿದವರು ಆತನಿಗೆ ವಿಧೇಯರು. ವಂಶಾವಳಿಯು ಹೆಸರನ್ನು ತಂದೆಯ ಹೆಸರಿನಿಂದ ಮೂಲವಾಗಿ ಹೇಳುತ್ತಿದೆ. ಪಿತ್ರಾರ್ಜಿತ ಆಸ್ತಿ ಮಗನಿಗೆ ಸೇರುತ್ತದೆ.

೨ **ಮಾತೃಪ್ರಧಾನ** (Matriarchal) ಇವರಲ್ಲಿ ತಾಯಿಗೆ ಮನ್ನಣೆ, ಅಧಿಕಾರ. ಆಕೆಯ ಹೆಸರಿಂದ ವಂಶಾವಳಿ ಹೇಳುತ್ತಾರೆ. ಪಿತೃ ಪ್ರಧಾನದಲ್ಲಿ ತಂದೆಗಿರುವ ಹಕ್ಕುಗಳೆಲ್ಲಿ ತಾಯಿಗಿರುತ್ತವೆ.

## 10. What is marriage? ಲಗ್ನವೆಂದರೇನು?

ಸಮಾಜದ ಕೆಲ ವಿಧಿಗಳಿಗನುಸಾರವಾಗಿ ಮಾನವನು ತನ್ನ ಲೈಂಗಿಕ ಪ್ರವೃತ್ತಿ, ಸಂತಾನವೃದ್ಧಿ, ಪರಸ್ಪರ ಸಹಕಾರಕ್ಕಾಗಿ ತನಗೆ ಒಪ್ಪುವ ಸ್ತ್ರೀಯೊಡನೆ ಕೂಡಿಕೊಳ್ಳುವದೆ ಲಗ್ನ. ವಿವಾಹ ಪ್ರತಿಬಂಧವು ಸಮಾಜ ಮತ್ತು ನಾಗರಿಕ ನೀತಿಗೆ ವಿರೋಧವಾಗಿದೆ. ವಿವಿಧ ಜಾತಿಗಳಲ್ಲಿ ವಿವಿಧ ಲಗ್ನ ಪದ್ಧತಿಗಳಿವೆ.

## 11 What are the different types of marriage? And what are their effects? ವಿವಿಧ ವಿವಾಹ ಪದ್ಧತಿಗಳಾವವು? ಅವುಗಳ ಪರಿಣಾಮವೇನು?

೧. **ಏಕಪತ್ನಿತ್ವ** (Monogamy) ಒಬ್ಬ ವ್ಯಕ್ತಿ ಒಬ್ಬಳೇ ಸ್ತ್ರೀಯನ್ನು ಲಗ್ನವಾಗುವುದು. ಇದು ಬಳಕೆಯಲ್ಲಿರುವ, ಸರಕಾರವು ಮಹತ್ವ ಕೊಟ್ಟ ಮತ್ತು ಉತ್ತಮವಾದ ಪದ್ಧತಿಯು. ಗಂಡ ಹೆಂಡಿರ ಆತ್ಮಗಳ ನೈಜ ಸಮ್ಮಿಲನವೂ, ಸಂಸಾರದಲ್ಲಿ ಸುಖವೂ ಆಗುವವು.

೨. **ಬಹುಪತ್ನಿತ್ವ** (Polygamy) ಒಬ್ಬನೇ ಅನೇಕ ಸ್ತ್ರೀಯರನ್ನು ವರಿಸುವುದು. ನಿರೋಗಿ ಮಕ್ಕಳಾಗುವುದಿಲ್ಲ. ಸಂಸಾರದಲ್ಲಿ ಜಗಳಾಟ, ಅಶಾಂತಿ, ವ್ಯತಿರೇಕವ್ಯಯ, ಸೋಮಾರಿತನ ಹುಟ್ಟುವವು. [illegible]ಗಳ ನೈಜ ಮಿಲನವಾಗುವುದಿಲ್ಲ.

೩. **ಬಹುಪತಿತ್ವ** (Polyandry) ಒಬ್ಬ ಸ್ತ್ರೀಯೊಡನೆ ಅನೇಕ ಪುರುಷರು ಸಂಬಂಧವಿಟ್ಟುಕೊಂಡಿರುವುದು. ಇದರಿಂದಾದರೂ ಪರಸ್ಪರ ದ್ವೇಷಭಾವ, ಜಗಳಾಟ ಮೊದಲಾದವುಗಳಿಂದ ಸಂಸಾರ ಸುಖವೆಂಬುದೇ ಇರದು. ಸ್ತ್ರೀಯಾದವಳು ಬಹಳ ಕಷ್ಟಕ್ಕೀಡಾಗುತ್ತಾಳೆ. ವಿವಿಧ ರೋಗ ಪ್ರಸಾರವಾಗಿ, ಮಕ್ಕಳಲ್ಲಾದರೂ ಊನಗಳಾಗುವವು. (ಮಾತೃಪ್ರಧಾನ ಪದ್ಧತಿ ಈ ರೀತಿಯ ಲಗ್ನದಿಂದ ಬಳಕೆಗೆ ಬಂದುದೆಂದು ತರ್ಕಿಸಿದೆ.)

೪. ತಂಡವಿವಾಹ (Group marriage) ಒಂದು ಸ್ತ್ರೀಯರ ತಂಡವು ಒಂದು ಪುರುಷರ ತಂಡದೊಡನೆಯೇ ಸಂಬಂಧವಿಡುವುದು. ನಿರ್ದಿಷ್ಟವಾಗಿ ಇಂಥವರಿಗೆ ಇಂಥವಳೆ ಪತ್ನಿಯೆಂದಿರುವುದಿಲ್ಲ. ಉತ್ಪನ್ನವಾಗುವ ಸಂಸಾರವಾದರೂ ಇಡೀ ಗುಂಪಿನ ಅಧಿಕಾರಕ್ಕೊಳಗಾಗುತ್ತವೆ. ಹೆತ್ತವರಿಗೆ ಸಂಬಂಧವಿರುವುದಿಲ್ಲ.

## 12. Whatis Endogamy and Exogamy?
## ಸಗೋತ್ರ ಮತ್ತು ಪರಗೋತ್ರ ವಿವಾಹವೆಂದರೇನು?

೧. ಮೂಲ ಕುಲವು ಒಂದೇಯಾಗಿದ್ದು ಒಬ್ಬನೇ ಮೂಲ ಪುರುಷನಿಂದ ಬೆಳೆದು ಬಂದ ಮನೆತನಕ್ಕೆ ಸಗೋತ್ರವೆನ್ನುತ್ತಾರೆ. ಇಂತಹ ಮನೆತನದ ಸ್ತ್ರೀ ಪುರುಷರ ನಡುವೆ ಆಗುವ ವಿವಾಹವೇ ಸಗೋತ್ರ. (Endogamy) ವಿವಾಹ. ಅವರು ಬೇರೆ ಗೋತ್ರದವರೊಡನೆ ವೈವಾಹಿಕ ಸಂಬಂಧ ಬೆಳೆಸುವುದಿಲ್ಲ.

೨. ಇದಲ್ಲದೆ ಸಗೋತ್ರದವರು ತಮ್ಮೊಳಗೆ ವಿವಾಹ ಸಂಬಂಧ ನಡೆಸದೆ ಇರುವುದೂ ಇದೆ. ಅವರು ಪರಗೋತ್ರದವರೊಡನೆ ಮಾತ್ರ ಸಂಬಂಧ ಬೆಳೆಸಬೇಕು. ಇದೇ ಪರಗೋತ್ರ (Exogamy) ವಿವಾಹವೆನಿಸುವುದು

## 13. What is the Importance of marriage?
## ಮದುವೆಯ ಮಹತ್ವವೇನು?

ಮದುವೆಯು ಕುಟುಂಬ ಜೀವನದ ಅಡಿಗಲ್ಲು. ಮದುವೆಯಿಲ್ಲದಿದ್ದರೆ ಕುಟುಂಬವುಳಿಯದು. ನಾಗರಿಕತೆ ಬೆಳೆಯದು. ಸಂತಾನವೃದ್ಧಿಯಾಗದು. ಮುಂದೆ ಮಾನವ ಜನಾಂಗವೇ ಇಲ್ಲವೆನಿಸುವುದು. ಗಂಡಸರು ಗಳಿಸಿ ತರುವುದು ಹೆಂಗಸರು ಓರಣವಾಗಿ ಮನೆಗೆಲಸಗಳನ್ನು ವ್ಯವಹಾರಗಳನ್ನು ಸಂಸಾರ ಸಮಸ್ಯೆಗಳನ್ನು ನೋಡಿಕೊಂಡು ಗಂಡಸಿಗೆ ಸಹಕಾರಿಯಾಗುವುದು–ಇತ್ಯಾದಿ ರೀತಿಯಿಂದ ಕುಟುಂಬ ಜೀವನವು ಸಾಗುತ್ತದೆ. ಲಗ್ನ ಪದ್ಧತಿ ಇರುತ್ತಿಲ್ಲವಾದರೆ ನಾಗರಿಕ ನೀತಿಗೂ ತಡೆಗಟ್ಟಿ ಮಾನವನು ತನ್ನ ಲೈಂಗಿಕ ಪ್ರವೃತ್ತಿಗಾಗಿ ಸಮಾಜದಲ್ಲಿ ಬಹು ಹೀನವಾಗಿ ವರ್ತಿಸಬಹುದು. ಸಂಘಜೀವನದ ತಳಹದಿಯು ಮೇಲೆಯೆ ಲಗ್ನ ಅವಲಂಬಿಸಿದೆ.

14. Write short notes on :–1) class. 2) caste. ವರ್ಗ ಮತ್ತು ಜಾತಿ–ಇವುಗಳ ಮೇಲೆ ಟಿಪ್ಪಣಿ ಬರೆಯಿರಿ.

೧. ವರ್ಗ ( Class ) ಸಮಾಜದಲ್ಲಿ ಬೆಳೆತಿರುವ ವಿವಿಧ ಕಾರ್ಯ ವೃತ್ತಿಗಳ ಮೇಲಿನಿಂದ ವರ್ಗವು ಹುಟ್ಟಿಕೊಂಡಿತು. ಜಾತಿಯು ಹುಟ್ಟಿನಿಂದ ನಿಶ್ಚಯಿಸಲ್ಪಡುವುದಾದರೆ ವರ್ಗವು ಕಾರ್ಯದ ಮೇಲೆ ಅವಲಂಬಿಸಿದೆ. ಸಿರಿವಂತ, ಕಾರ್ಮಿಕ, ನೌಕರ, ವ್ಯಾಪಾರಿ, ಶಿಕ್ಷಿತ, ಹಿಂದುಳಿದ ಮೊದಲಾದ ವರ್ಗಗಳು ಜನರ ವ್ಯವಹಾರದ ಮೇಲಿನಿಂದ ಹುಟ್ಟಿವೆ. ಈ ಗುಂಪುಗಳಿಂದಾದರೂ ರಾಷ್ಟ್ರೀಯ ಐಕ್ಯಕ್ಕೆ ಹಾನಿಯಿದೆ. ವರ್ಗ ವರ್ಗಗಳ ನಡುವೆ ತಿಕ್ಕಾಟ ನಡೆಯದೆ ಇಲ್ಲ. ಆದರೆ ಒಂದು ವರ್ಗದಿಂದ ಮತ್ತೊಂದು ವರ್ಗಕ್ಕೆ ಸುಲಭವಾಗಿ ಮಾರ್ಪಾಟ ಹೊಂದಬಹುದು.

೨. ಜಾತಿ ( Caste ) ವರ್ಗತರಗತಿಗಳಂತೆಯೆ ಜಾತಿ. ಭಾರತದಲ್ಲಿ ಜಾತೀಯ ಪದ್ಧತಿಯು ಪ್ರಾಚೀನ ಆರ್ಯರ ಕಾಲದಿಂದಲೇ ಹುಟ್ಟಿತು. ಮೊದಲು ನಾಲ್ಕು ವರ್ಗಗಳಾದವು ಅಲ್ಲಿಂದ ಅನೇಕ ಮಿಶ್ರ ಜಾತಿಗಳು ಹುಟ್ಟುತ್ತ ಇದೀಗ ನಮ್ಮಲ್ಲಿ ಸಾವಿರಾರು ಜಾತಿಗಳಾಗಿವೆ. ಜನನವು ಜಾತಿಯನ್ನು ಹೇಳುವುದು ಶೂದ್ರನಲ್ಲಿ ಹುಟ್ಟಿದವನು ಬ್ರಾಹ್ಮಣನಾಗಲಾರ. ಇದಕ್ಕೆ ಧಾರ್ಮಿಕ ಹಾಗೂ ಸಾಮಾಜಿಕ ಬೆಂಬಲವಿದೆ. ವಿವಿಧ ಜಾತಿಗಳಲ್ಲಿ ವಿವಿಧ ನೀತಿ ಪದ್ಧತಿಗಳಿದ್ದು ಬೇಕಾದಂತೆ ಜಾತಿಯನ್ನು ಬದಲು ಮಾಡಲು ಬಾರದು.

15. Give the Advantages and disadvantages of caste system. ಜಾತಿ ಪದ್ಧತಿಯ ಲಾಭ ಹಾನಿಗಳನ್ನು ಹೇಳಿರಿ.

ಲಾಭ:– ವಿಶಿಷ್ಟ ಜನರೇ ವಿಶಿಷ್ಟ ಕೆಲಸಗಳನ್ನು ಮಾಡಬೇಕಾಗಿರುವದರಿಂದ ನಿರುದ್ಯೋಗ ಬೆಳೆಯದು. ವಂಶ ಪಾರಂಪರ್ಯ ನಡೆಯುವ ಮನೆತನ ಉದ್ಯೋಗದ ಕುರಿತು ಹೆಚ್ಚಿನ ಶಿಕ್ಷಣದ ಅವಶ್ಯಕತೆಯಿಲ್ಲ. ಗ್ರಾಮ ವಿಭಾಗ, ಸಹಕಾರ ಒಂದು ಬಗೆಯ ಶಿಸ್ತು ಕಟ್ಟುನಿಟ್ಟುಗಳು ಇ[illegible]ವೆ. ವಿವಿಧ ಧರ್ಮ–ನೀತಿಗಳು ನಿರಾತಂಕವಾಗಿ ಸಾಗುತ್ತವೆ. [illegible]ನ್ನು ಶುದ್ಧವಾಗಿರಿಸುತ್ತವೆ.

**ಹಾನಿ:–** ಆದರೆ ಮೇಲು ಕೀಳು ಭಾವನೆ ಹುಟ್ಟಿ ಪರಸ್ಪರ ಜಾತಿಜಾತಿಗಳ ನಡುವೆ ಕಿತ್ತಾಟ ಹುಟ್ಟುವುದು. ವ್ಯಕ್ತಿ ಧಾರ್ಮಿಕ ಕಟ್ಟುನಿಟ್ಟುಗಳಿಗೆ ಗಣಿಯಾಗಿ ನಡೆಯಬೇಕಾಗುವುದರಿಂದ ವೈಯುಕ್ತಿಕ ಸ್ವಾತಂತ್ರ್ಯ ಪಡೆಯಲಾರನು. ವಂಶಪಾರಂಪರ್ಯ ಉದ್ಯೋಗ ಸಾಗಿಸುವುದು ಸಾಧ್ಯವಿಲ್ಲ. (ಅವರವರ ಅಭಿರುಚಿಯಂತೆ ಕೆಲಸ ಮಾಡಬೇಕು.) ಇದರಿಂದ ಸೋಮಾರಿತನ ಬೆಳೆಯುವುದು. ಹಿಂದುಳಿದ ಜಾತಿಗಳಿಗೆ ಮುಂದುವರಿಯಲು ಅವಕಾಶವಿಲ್ಲ. ರಾಷ್ಟ್ರೀಯ ಐಕ್ಯತೆಗೆ ಈ ಜಾತಿ ವಿಘಾತವಿದ್ದು ಧಾರ್ಮಿಕ ಹಾಗೂ ಸಾಮಾಜಿಕ ವೈಮನಸ್ಸಿಗೆ ವ್ಯಕ್ತಿ ಗುರಿಯಾಗುತ್ತಾನೆ. ನಾಗರಿಕತೆ ಬೆಳೆಯಲು ತಡೆಯಾಗುವುದು.

## 16. What are the defects of the present caste system ? How should these be removed ?

**ಈಗಿನ ಜಾತೀಯ ಪದ್ಧತಿಯಲ್ಲಿನ ದೋಷಗಳನ್ನೂ ಅವುಗಳನ್ನು ನಿವಾರಿಸುವ ಉಪಾಯವನ್ನು ಹೇಳಿರಿ.**

ಜಾತಿಯು ರಾಷ್ಟ್ರೀಯ ಐಕ್ಯಕ್ಕೆ ಧಕ್ಕೆಯಾಗಿದೆ. ಮತ್ಸರ ಭೇದ ಭಾವಗಳು ಬೆಳೆಯಲು ಕಾರಣವಾಗಿದೆ. ಲಗ್ನ ಸ್ವಾತಂತ್ರ್ಯ, ಉದ್ಯೋಗ ಸ್ವಾತಂತ್ರ್ಯಗಳನ್ನು ಅದು ಕಸಿದುಕೊಂಡಿದೆ. ಅಸ್ಪೃಶ್ಯತೆಯಿಂದಾಗಿ ಪರ ಜಾತಿಯವರೊಡನೆ ಸಹಕಾರ, ಬಂಧು ಭಾವಗಳನ್ನು ಕಳೆದುಕೊಂಡಿದೆ. ಸಮಾಜದ ಒಕ್ಕಟ್ಟಿಗೆ ಜಾತಿಬಿಕ್ಕಟ್ಟಾಗಿದೆ. ಅದು ಮಾನವನ ವ್ಯವಹಾರ ಸ್ವಾತಂತ್ರ್ಯಕ್ಕೆ ಪೂರ್ಣ ತಡೆಯಾಗಿದೆ.

**ಪರಿಹರಿಸುವುದು:–** ಜಾತೀಯ ಸಂಖ್ಯೆಯನ್ನು ಕಡಿಮೆ ಮಾಡಲು ಉಪಜಾತಿಗಳೆನಿಸಿದವುಗಳನ್ನು ಮುಖ್ಯಜಾತಿಗಳಿಗೆ ಕೂಡಿಸಿಬಿಡಬೇಕು. ಪರ ಜಾತಿಯೊಡನೆ ವಿವಾಹ, ಪತ್ರಕಗಳಿಗೆ ಪ್ರತಿಬಂಧವಿರಕೂಡದು. ಪರಜಾತಿಯವರಲ್ಲಿ ಊಟಉಪಚಾರಗಳಿಗೆಡೆಕೊಟ್ಟು ಅಸ್ಪೃಶ್ಯತೆಯನ್ನು ಹೋಗಲಾಡಿಸಬೇಕು. ವಿಶಿಷ್ಟ ಪದ್ಧತಿಯಂತೆ ವಿಶಿಷ್ಟ ದೇವರನ್ನು ಪೂಜಿಸುವ, ವಿಶಿಷ್ಟ ಧರ್ಮವನ್ನೇ ಅವಲಂಭಿಸಬೇಕೆನ್ನುವ ಒತ್ತಾಯಕ್ಕೆಡೆಯಿರಬಾರದು. ಜಾತೀಯ ಸಂಘ ಸಂಸ್ಥೆಗಳು ತಮ್ಮೊಳಗೆ ಒಕ್ಕಟ್ಟು ಒಮ್ಮತಕ್ಕೆ [illegible]

ಬೇಕು. ಎಲ್ಲ ಧರ್ಮ-ಜಾತಿಗಳ ಮೂಲಗ್ರಂಥಗಳನ್ನು ಪರಾಂಭರಿಸಿ ಎಲ್ಲರಿಗೂ ಉಚಿತವಾಗುವ ನೀತಿ-ಕಾಯಿದೆಗಳ ರಚನೆಯಾಗಬೇಕು.

**17. Give the Future of the Caste system. ಜಾತಿ ಪದ್ಧತಿಯ ಭವಿತವ್ಯ ಹೇಳಿರಿ.**

ಎಲ್ಲರಿಗೂ ಸಮಾನ ಹಕ್ಕು, ಮಾನ್ಯತೆ ದೊರೆಯಬೇಕೆಂಬ ಸರಕಾರದ ಧ್ಯೇಯಕ್ಕೆ, ಈಗಿನ ಆರ್ಥಿಕ ಪರಿಸ್ಥಿತಿಗೆ ತಕ್ಕಂತೆ ಜಾತೀಯ ಪದ್ಧತಿಗೆ ಇನ್ನು ಮಹತ್ವ ದೊರೆಯಲಾರದು. ಪ್ರಾಚೀನ ಸಾಂಪ್ರದಾಯಗಳ ಮೇಲೆ ಜನರಿಗೆ ಆಧುನಿಕ ಶಿಕ್ಷಣ ನಾಗರಿಕತೆಯ ಲಕ್ಷಣಗಳಿಂದಾಗಿ ತಿರಸ್ಕಾರ ಭಾವ ಹುಟ್ಟಹತ್ತಿದೆ. ಧರ್ಮಗುರುಗಳೂ, ಸನ್ಯಾಸಿಗಳೂ ನೀಚ ಕಾರ್ಯಗಳನ್ನು ಮಾಡಹತ್ತಿ ಧಾರ್ಮಿಕ ಡಂಭಾಚಾರ ತೋರಿಸಹತ್ತಿ ಜನರಿಗೆ ಧರ್ಮ-ಜಾತಿಗಳ ಮೇಲೆ ನಂಬಿಗೆಯಿಲ್ಲ. ಎಲ್ಲರಲ್ಲಿ ಬಂಧುಭಾವ ಬೆಳೆಯಬೇಕು, ಬೇಕಾದ ಕೆಲಸ ಮಾಡಬಹುದು. ಬೇಕಾದ ಜಾತಿಯೊಡನೆ ಲಗ್ನ ವಾಗಬಹುದು..... ಇತ್ಯಾದಿ ವ್ಯಕ್ತಿಸ್ವಾತಂತ್ರ್ಯವನ್ನು ಜನ ಬಯಸುತ್ತಿದ್ದಾರೆ ಅಂತೂ ಹಳೆಯ ಸಾಂಪ್ರದಾಯಗಳ ಮೇಲೆ ಕಟ್ಟಲ್ಪಟ್ಟ ಜಾತೀಯ ಪದ್ಧತಿಯು ಇನ್ನು ಅಲ್ಪ ಸಮಯದಲ್ಲಿ ಪೂರ್ಣ ಅಳಿಯಬಹುದೆನ್ನಿ.

**18. What is untouchability? ಅಸ್ಪೃಶ್ಯತೆಯೆಂದರೇನು?**

ಅಸ್ಪೃಶ್ಯರು ಎಂದರೆ ಮುಟ್ಟಲು ಅಯೋಗ್ಯರು. ಇಂಥ ಜನರಿಗೆ ಹಿಂದುಳಿದ ವರ್ಗವೆನ್ನುತ್ತಾರೆ. ನಮ್ಮಲ್ಲಿರುವ ಈ ಅಸ್ಪೃಶ್ಯತೆಯಿಂದಲೆ ನಾವು ಸುಧಾರಿತ ನಾಗರಿಕ ರಾಷ್ಟ್ರದವರೆನಿಸಿಕೊಳ್ಳಲು ಅಯೋಗ್ಯರಾಗಿದ್ದೇವೆ. ಏಕೆಂದರೆ ಚಂದ್ರನಿಗಿರುವ ಕಲೆಯಂತೆ ಅಸ್ಪೃಶ್ಯತೆ ನಮಗೊಂದು ಕಳೆಯಾಗಿದೆ. ಅವರು ಅಜ್ಞಾನದ ಕೂಪದಲ್ಲಿ ಬಿದ್ದಿರುತ್ತಾರೆ. ಕಾರಣ ನಾವು ಒಮ್ಮತದಿಂದ ಹಿಂದುಳಿದ ವರ್ಗಗಳ ಏಳಿಗೆ ಬಯಸಿ ಅವರನ್ನು ನಾಗರಿಕತೆಯ ದಾರಿಗೆ ಹಚ್ಚಬೇಕು.

**19. (A) Write short notes on :- 1) Community 2) clan, 3) Tribe B) Explain the growth**

of society & state. (A) ಟಿಪ್ಪಣಿ ಬರೆಯಿರಿ (೧) ಸಂಗಡ (೨) ತಂಡ (೩) ಬಣ. (B) ಸಮಾಜ ಹಾಗೂ ರಾಷ್ಟ್ರದ ಬೆಳವಣಿಗೆ ಕುರಿತು ವಿವರಿಸಿರಿ.

(A) ೧. ನೈಸರ್ಗಿಕವಾಗಿ ಸಂಸಾರವು ಬೆಳೆಯುತ್ತ ಬೇರೆ ಬೇರೆ ಕುಟುಂಬಗಳೊಡನೆ ಸಂಬಂಧ ಬೆಳೆಸಿಕೊಂಡು ಒಂದು ಸಂಗಡ ಹುಟ್ಟಿಕೊಳ್ಳುವುದು.

೨. ಇಂತಹ ಸಂಗಡಗಳು ಒಂದೆಡೆಯಲ್ಲಿ ಬಹುಕಾಲವಿದ್ದು ಅವುಗಳು ಇತರ ಸಂಗಡಗಳೊಡನೆ ಸಂಬಂಧ ಬೆಳೆಸಿಕೊಂಡು ದೊಡ್ಡ ಗುಂಪಾಗಿ ತಂಡವೆನಿಸುವುದು.

೩. ಹೀಗೆ ತಂಡಗಳು ಕ್ರಮೇಣ ಬೆಳೆಯುತ್ತ ಸುತ್ತಲೂ ಹರಡುತ್ತ ಇತರ ತಂಡಗಳಲ್ಲಿ ಸಂಬಂಧ ಇಟ್ಟುಕೊಂಡು ಸಂಯುಕ್ತವಾಗಿ 'ಬಣ'ವು ಹುಟ್ಟಿಕೊಳ್ಳುವುದು. ಈ ಬಣಗಳಲ್ಲಿ ಒಂದೇ ರೀತಿಯ ನೀತಿ ಇದ್ದು, ಒಬ್ಬ ಯಜಮಾನನಿದ್ದು ಅವನ ಹೆಸರಿನಿಂದಲೇ ತಮ್ಮ ಉತ್ಪತ್ತಿ ಹೇಳುತ್ತ ಜನರು ವಿಧೇಯರಾಗಿರುತ್ತಾರೆ.

**(B) ಸಮಾಜ ಮತ್ತು ರಾಷ್ಟ್ರದ ಬೆಳವಣಿಗೆ:-** ಬಣಗಳು ಮುಂದೆ ಬೆಳೆಯುತ್ತ ಹೋಗಿ ಸಂಯುಕ್ತವಾದ ಒಂದು ಹಳ್ಳಿಯಾಗುವುದು. ಆ ಹಳ್ಳಿಗಳು ಸುಧಾರಿಸುತ್ತ ಪಟ್ಟಣಗಳೆನಿಸಿ ಹೆಚ್ಚು ಜನಸಂಖ್ಯೆಯನ್ನೊಳಗೊಂಡಿರುತ್ತವೆ. ಹೀಗೆ ಸಾವಿರಾರು ಪಟ್ಟಣಗಳು ಬೆಳೆಯುತ್ತ ಒಂದು ರಾಷ್ಟ್ರವಾಗುವುದು. ಅದರ ಆಳಿಕೆಗೆ ಯಾವುದಾದರೊಂದು ಸರಕಾರವಿರುತ್ತದೆ. ಇಲ್ಲವೆ ಒಬ್ಬ ಸ್ವತಂತ್ರ ರಾಜನಿರುತ್ತಾನೆ. ಇಂತಹ ಸರಕಾರವು ರಾಷ್ಟ್ರದ ಎಲ್ಲ ವ್ಯವಹಾರವನ್ನು ತನ್ನ ನಿಯಂತ್ರಣದಲ್ಲಿರಿಸಿಕೊಳ್ಳುವುದು.

**ರಾಷ್ಟ್ರ ನಿರ್ಮಾಣ:-** ಸಮಾಜದಲ್ಲಿನ ವಿವಿಧ ಸಂಘಗಳ, ವಿವಿಧ ಮತಗಳ ಜನರು ಒಟ್ಟುಗೂಡಿ ಜಾತೀಯತೆಯ ತಳಹದಿಯ ಮೇಲೆ ರಾಷ್ಟ್ರ ನಿರ್ಮಿಸಬಹುದು. ಆರ್ಥಿಕ ಸ್ಥಿತಿ ಉತ್ತಮವಿದ್ದು ಅವರ ಶಕ್ತಿಯಿಂದಲೂ ಶಿಕ್ಷಣದ ಪ್ರಭಾವದಿಂದಲೂ. ಪ್ರೇಮ, ಸ್ನೇಹ, ಸ್ವಾತಂತ್ರ್ಯ ಧ್ಯೇಯಗಳ ಲಾಲಸೆಯಿಂದಲೂ ರಾಷ್ಟ್ರಗಳು ಹುಟ್ಟಬಹುದು. ರಾಜಕೀಯ ಸುಧಾರಣೆ, ಕ್ರಾಂತಿ, ಅವತಾರ ಪುರುಷರ ಪ್ರಚಾರಗಳಿಂದಲೂ, ನೈತಿಕ ಬಲದಿಂದಲೂ,

ಯುದ್ಧ ಶಕ್ತಿಗಳ ಪ್ರಯೋಗದಿಂದಲೂ, ರಾಷ್ಟ್ರಗಳನ್ನು ನಿರ್ಮಿಸಬಹುದು. ಹೀಗೆ ರಾಷ್ಟ್ರ ನಿರ್ಮಾಣಕ್ಕೆ ಮತ್ತು ಬೆಳವಣಿಗೆಗೆ ವಿವಿಧ ಅಡಿಗಲ್ಲುಗಳವು. ಸಮಾಜದ ಬೆಳವಣಿಗೆಗೆ ರಾಷ್ಟ್ರದ ಬೆಳವಣಿಗೆಗೆ ನಡುವೆ ನಿಕಟ ಸಂಬಂಧ ವಿರುವುದು.

**ರಾಷ್ಟ್ರವೆಂದರೆ :–** ಜನಸಂಖ್ಯೆ ಬೆಳೆಯುತ್ತ ಸಮಾಜವು ವಿಶಾಲ ವಾದಂತೆ ಅದನ್ನು ಅಂಕಿತದಲ್ಲಿಟ್ಟುಕೊಂಡು ಶಿಸ್ತಿನಿಂದ ವ್ಯವಹಾರ ಸಾಗಿಸಲು ಒಂದು ಸಂಸ್ಥೆಯ ಅಗತ್ಯ ಬೀಳುವುದು. ಈ ಸಂಸ್ಥೆಗೆ ಎಲ್ಲರೂ ವಿಧೇಯರಿರಬೇಕಲ್ಲದೆ ಅದು ನಿರ್ಮಿಸುವ ನೀತಿ ಕಾಯ್ದೆಗಳಿಗನುಕೂಲವಾಗಿ ವರ್ತಿಸಬೇಕು. ಇದು ಸಮಾಜದ ಬೆಂಬಲದಿಂದ ಅಧಿಕಾರ ಪಡೆದು ಸಮಾಜದ ಹಿತಕ್ಕಾಗಿ ದುಡಿಯುತ್ತಿದೆ. ಈ ಸಂಸ್ಥೆಯೆ ' ರಾಷ್ಟ್ರ ' ವೆನಿಸುವುದು.

**20. Give the factors that go to form a Nation. ರಾಷ್ಟ್ರ ರಚನೆಯ ಘಟಕಗಳನ್ನು ಹೇಳಿರಿ.**

೧. **ಜನರು :–** ಜನರಿಗಾಗಿಯೆ ರಾಷ್ಟ್ರವು ಹುಟ್ಟುವುದೆಂದಮೇಲೆ ಜನರಿಲ್ಲದಮೇಲೆ ರಾಷ್ಟ್ರವೇಕೆ ?

೨. **ಸಂಸ್ಕೃತಿ :–** ಜೀವನ ಪದ್ಧತಿ, ಸಂಸ್ಕೃತಿ, ಭಾವಗಳು ಏಕ ರೀತಿಯವಿದ್ದರೆ ಒಂದು ರಾಷ್ಟ್ರಕ್ಕೆ ಬೆಂಬಲವಿರುವುದು.

೩. **ಪ್ರದೇಶ :–** ಜನ ವಾಸಕ್ಕೆ ಸಾಕಷ್ಟು ವಿಶಾಲ ಪ್ರದೇಶ ಅವಶ್ಯ ಬೇಕು.

೪. **ಸರಕಾರ :–** ರಾಜ್ಯ ಕಾರಭಾರವನ್ನು ಸುಗಮವಾಗಿ ಸಾಗಿಸಲು ಉತ್ತಮ ಸರಕಾರ ಬೇಕು.

೫. **ಸಾರ್ವಭೌಮಾಧಿಕಾರ :–** ಪ್ರತಿಯೊಂದು ರಾಷ್ಟ್ರಕ್ಕೂ ಅದರ ಎಲ್ಲ ಹಕ್ಕುಗಳ ಬಗ್ಗೆ ಸ್ವಾತಂತ್ರ್ಯ ದೊರೆತಿರಬೇಕು. ಅದು ಬೇರೆ ರಾಷ್ಟ್ರಗಳ ಕೈಕೆಳಗೆ ವ್ಯವಹಾರ ನಡೆಸುತ್ತಿದ್ದರೆ ರಾಷ್ಟ್ರವೆನ್ನುವ ಯೋಗ್ಯತೆ ಪಡೆಯದು. ಈ ಅಧಿಕಾರಕ್ಕೆ ಸಾರ್ವಭೌಮತ್ವವೆನ್ನುವರು.

ಹೀಗೆ ಮೇಲಿನ ಎಲ್ಲ ಘಟಕಗಳಿಗೂ ಕೊರತೆಯಿಲ್ಲವಾದಲ್ಲಿ ಅದೊಂದು ಉತ್ತಮ ರಾಷ್ಟ್ರವೆನ್ನಲಡ್ಡಿಯಿಲ್ಲ.

**21. Who is a Citizen ? ನಾಗರಿಕನೆಂದರೆ ಯಾರು ?**

ಯಾವನಲ್ಲಿ ನಾಗರಿಕತೆಯ ಲಕ್ಷಣವೂ, ಮತ್ತು ಆ ಪ್ರಕಾರ ವರ್ತನೆಯೂ ಇರುವುದೋ ಅವನೇ ನಾಗರಿಕನು. ಅವನು ಪಟ್ಟಣದಲ್ಲೇ ಇರಲಿ, ಹಳ್ಳಿಯಲ್ಲೇ ಇರಲಿ ನಾಗರಿಕತೆ ಅವನಲ್ಲಿ ಬೇಕು.

**22. Describe his characters. ನಾಗರಿಕನಲ್ಲಿರುವ ಲಕ್ಷಣಗಳನ್ನು ವಿವರಿಸಿರಿ.**

ಅವನೊಂದು ವಿಶಿಷ್ಟ ಸ್ಥಳದಲ್ಲಿ ವಾಸ ಮಾಡುವನು. ಸರಕಾರದಿಂದ ಕೆಲ ಹಕ್ಕುಗಳನ್ನು ಪಡೆದು, ಅದಕ್ಕೆ ನಿಷ್ಠನಾಗಿರುವನು. ತನ್ನ ಕರ್ತವ್ಯಗಳನ್ನು ಸರಿಯಾಗಿ ಪಾಲಿಸುವನು. ಸರಕಾರದ ಆಡಳಿತೆಗೆ ನೆರವಾಗಿರುವನು. ಪರದೇಶಗಳಿಗೆ ತನ್ನ ದೇಶದ ಗುಟ್ಟನ್ನು ತಿಳಿಸುವುದಿಲ್ಲ. ತನ್ನ ಹಿತ ಬಯಸುವಂತೆ ಸಮಾಜದ, ರಾಷ್ಟ್ರದ ಹಿತ ಬಯಸಿ ನಡೆಯುತ್ತಾನೆ.

**23. How is citizenship acquired ? ನಾಗರಿಕತೆಯ ಸಂಪಾದನೆಯೆಂತು ?**

ಒಂದು ಸ್ಥಳದಲ್ಲಿ ಕಡಿಮೆಯೆಂದರೆ ೫ ವರ್ಷ ವಾಸಿಸಬೇಕು. ಸರಕಾರದಿಂದ ಕೆಲ ವಿಶಿಷ್ಟ ಹಕ್ಕು ಪಡೆದರೆ, ಹಾಗೂ ಸರಕಾರಿ ನೌಕರಿ ಮಾಡಿದರೆ ಸ್ತ್ರೀಯು ಪರದೇಶದವನೊಡನೆ ಲಗ್ನವಾದರೆ, ಪರದೇಶದಲ್ಲಿ ಆಸ್ತಿ ಸಂಪಾದಿಸಿದರೆ ಹಾಗೂ ಅಲ್ಲಿ ಸರಕಾರಿ ನೌಕರಿ ಹಿಡಿದರೆ. ( 'ಮುಕ್ತಿಕೇಳ'ವುದು ) ಪತ್ರಕ್ಕೆ ಹೋದರೆ—ಹೀಗೆ ನಾಗರಿಕತೆಯನ್ನು ಪಡೆಯಬಹುದು. ನಾಗರಿಕತೆಯನ್ನು ಅದಲು ಬದಲು ಮಾಡಬಹುದಾದರೂ ಒಬ್ಬನೇ ಏಕ ಕಾಲದಲ್ಲಿಯೇ ಎರಡು ಕಡೆಯ ನಾಗರಿಕತೆಯನ್ನು ಹೊಂದಲು ಸಾಧ್ಯವಿಲ್ಲ.

**24. How will original citizenship be lost ? ಮೂಲ ನಾಗರಿಕತೆಯನ್ನು ಕಳೆದುಕೊಳ್ಳುವುದೆಂತು ?**

ಬೇರೆದೇಶದಲ್ಲಿ ಸರಕಾರಿ ನೌಕರಿ ಹಿಡಿದರೆ, ಆಸ್ತಿ ಸಂಪಾದಿಸಿದರೆ, ಪರದೇಶೀಯನೊಡನೆ ಸ್ತ್ರೀಯು ಮದುವೆಯಾದರೆ, ಮಾತೃ ಭೂಮಿಯಿಂದ

ಬಹುಕಾಲದ ವರೆಗೆ ಹೊರಗಿದ್ದರೆ, ಸರಕಾರದ ವಿರುದ್ಧ ಬಂಡಾಯ ಮಾಡಿದರೆ, ಅಥವಾ ಅವಿಧೇಯನಾಗಿ ನಡೆದರೆ, ದೊಡ್ಡ ತಪ್ಪಿಗಾಗಿ ಶಿಕ್ಷಿಸಲಾದರೆ, ಸೈನ್ಯದಿಂದ ತಪ್ಪಿಸಿಕೊಂಡು ಹೋದರೆ, ದತ್ತಕ್ಕೆ ಹೋದರೆ,–ಈ ಎಲ್ಲ ಕಾರಣಗಳಿಂದ ಮೂಲ ನಾಗರಿಕತೆಯನ್ನು ಕಳೆದುಕೊಳ್ಳುವರು.

25. What are the different forms of citizen ship? **ನಾಗರಿಕತೆಯ ಪ್ರಭೇದಗಳಾವವು ?**

೧. **ಮೂಲಭೂತ** (Natural) **ನಾಗರಿಕತೆ:–** ಇದು ರಕ್ತ ಸಂಬಂಧ, ಹಿರಿಯರ ಜನ್ಮ ಸ್ಥಳಗಳನ್ನವಲಂಬಿಸಿಕೊಂಡು ಯಾವುದೇ ದೇಶದಲ್ಲಿ ಜನಿಸಿದರೂ ಹೆತ್ತವರ ದೇಶದ ನಾಗರಿಕತೆಯನ್ನೆ ಪಡೆಯುವುದು. (ಇಟಲಿ, ಫ್ರಾನ್ಸ್–ಮುಂ.)

೨. **ಸಾಧಿತ** (Naturalised) **ನಾಗರಿಕತೆ:–** ವಿಶಿಷ್ಟವಾದ ಒಂದು ಪ್ರದೇಶದಲ್ಲಿ ಜನಿಸಿದರೆ– ಅಂದರೆ ಅವರವರ ಜನ್ಮ ಸ್ಥಳಗಳನ್ನವಲಂಬಿಸಿಕೊಂಡು ಪಡೆಯುವ ನಾಗರಿಕತೆ (ಅರ್ಜಂಟೇನಿಯಾ–ಮುಂ.) ಭಾರತದವನಿಂದ ಒಂದು ಮಗು ಅರ್ಜಂಟೇನಿಯಾದಲ್ಲಿ ಹುಟ್ಟಿದರೆ ಆ ಮಗುವಿಗೆ ಅಲ್ಲಿಯ ನಾಗರಿಕತೆಯನ್ನೆ ಕೊಡುವರು.

ಇನ್ನು ಇಂಗ್ಲಂಡು ಅಮೇರಿಕಾ ಮೊದಲಾದಲ್ಲಿ ಎರಡು ವಿಧದ ನಾಗರಿಕತೆಯನ್ನು ಏಕಕಾಲದಲ್ಲೆ ಉಪಯೋಗಿಸುತ್ತಾರೆ. ಪರದೇಶೀಯರಿಗೆ ಸಾಧಿತ ಹಾಗೂ ದೇಶೀಯರಿಗೆ ಮೂಲಭೂತ ನಾಗರಿಕತೆಯನ್ನು ಬಳಸುವರು. ನಾಡಿಗರಿಗೆ ಪರನಾಡಿನಲ್ಲಿ ಮಕ್ಕಳಾಗಲಿ, ಪರನಾಡಿಗರಿಗೆ ನಾಡಿನಲ್ಲಿ ಮಕ್ಕಳಾಗಲಿ– ಆ ಮಕ್ಕಳಿಗೆ ತಮ್ಮ ನಾಗರಿಕತೆಯನ್ನೆ ಬಳಸುವರು. ಈ ರೀತಿಯ ತಂತ್ರಕ್ಕೆ ಸಿಕ್ಕುವವರು ಯಾವದಾದರೊಂದು ನಾಗರಿಕತೆಯನ್ನು ಬಿಡಬೇಕಾಗುತ್ತದೆ.

26. Explain the "Rights of a citizen" **ನಾಗರಿಕನ ಹಕ್ಕುಗಳನ್ನು ವಿವರಿಸಿರಿ.**

( ಅಪರಾಧ, ಹುಚ್ಚು, ದಿವಾಳಿಖೋರ ಇರದಿದ್ದರೆ ಕೆಳಗಿನ ಹಕ್ಕುಗಳು ಎಲ್ಲರಿಗೂ ದೊರೆಯುವುವು.

೧. **ರಾಜಕೀಯ ಹಕ್ಕು** :– ಚುನಾವಣೆಗಳಲ್ಲಿ ಉಮೇದ್ವಾರನಾಗಿ ನಿಂತು ಆರಿಸಿ ಬರಬಹುದು. ಪ್ರತಿಯೊಬ್ಬ ಪ್ರೌಢನು ಚುನಾವಣೆಗಳಲ್ಲಿ ಮತದಾನ ಮಾಡಬಹುದು. ಸರಕಾರಿ ನೌಕರಿಮಾಡಬಹುದು. ಎಲ್ಲ ದರ್ಜೆಯ ಸೇವಾವೃತ್ತಿ ಕೈಕೊಳ್ಳಬಹುದು.

೨. **ಲೌಕಿಕ ಹಕ್ಕು**:– ಆತ್ಮರಕ್ಷಣೆಗೆಂದು ಸರಕಾರಿ ಸೂಚಿತ ಆಯುಧವನ್ನು ಹಿಡಿಯಬಹುದು. ಕಾಯಿದೆ ವಿರುದ್ಧವಾಗಿ ಯಾರನ್ನು ದಂಡಿಸಲಿಕ್ಕೆ ಬಾರದು. ಎಲ್ಲರಿಗೂ ಮಾನರಕ್ಷಣೆ ಹಾಗೂ ಜೀವರಕ್ಷಣೆ ಹಕ್ಕುಗಳಿವೆ. ಸರಕಾರೀ ಆಡಳಿತೆಗೊಳಗಿರುವ ಯಾವುದೇ ಪ್ರದೇಶದಲ್ಲಿ ಚಲಿಸಬಹುದು. ಬೇರೆಯವರಿಗೆ ತನ್ನ ಮನದ ಅಭಿಪ್ರಾಯವನ್ನು ತಿಳಿಸಬಹುದು. ಹಾಗೂ ಸಾರ್ವಜನಿಕ ಸಂಘ ಸಂಸ್ಥೆಗಳನ್ನು ಸ್ಥಾಪಿಸಬಹುದು.

೩. **ಧಾರ್ಮಿಕ ಹಕ್ಕು**:– ಬೇಕಾದ ಮತವನ್ನು, ದೇವರನ್ನು ಅನುಸರಿಸಬಹುದು. ದಾನಮಾಡಬಹುದು. ನಿಧಿಯನ್ನು ಸಂಪಾದಿಸಲು ಬಹುದು. ಸಾರ್ವಜನಿಕ ಹಿತಕ್ಕೆ ಅಡ್ಡಿಯಾಗದಂತೆ ಯಾವುದೇ ಧಾರ್ಮಿಕ ವ್ಯವಹಾರ ನಡೆಸಬಹುದು. ಧಾರ್ಮಿಕ ನಿಧಿಗೆ–ಆಸ್ತಿಗೆ ಆದಾಯಕರ (In come Tax) ಇಲ್ಲ.

೪. **ಆಸ್ತಿಯ ಹಕ್ಕು**:– ಕಾನೂನಿನ ಹೊರತಾಗಿ ಆಸ್ತಿಯನ್ನು ಕಸಿದುಕೊಳ್ಳಲು ಬಾರದು. ಕೆಲ ನಿರ್ಬಂಧಗಳ ಹೊರತಾಗಿ ಒಬ್ಬನು ತನಗೆ ಬೇಕಾಗುವಷ್ಟು ಆಸ್ತಿಯನ್ನು ಸಂಪಾದಿಸಬಹುದು. ಮತ್ತು ವಿನಿಯೋಗಿಸಬಹುದು

೫. **ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಹಕ್ಕು**:– ಎಲ್ಲರಿಗೂ ಅವರವರ ಭಾಷೆ, ಸಂಸ್ಕೃತಿಗಳನ್ನು ಬೆಳೆಸುವ ಹಾಗೂ ರಕ್ಷಿಸುವ ಅಧಿಕಾರವಿದೆ. ಬೇಕಾದ ವಿಧದ ಶಿಕ್ಷಣ ಪಡೆಯಬಹುದು.

೬. **ಕಾಯ್ದೆ ಹಕ್ಕು**:– ಎಲ್ಲರಿಗೂ ನ್ಯಾಯದೊರೆಯುವ ರೀತಿಯಲ್ಲಿ ಸಮಾನ ಕಾಯ್ದೆ ಹೇರಲಾಗಿದೆ.

೭. **ಕೌಟುಂಬಿಕ ಹಕ್ಕು**:– ಪ್ರತಿಯೊಬ್ಬನೂ ತನಗೆ ಬೇಕಾಗುವ ಸ್ತ್ರೀಯೊಡನೆ ವಿವಾಹವಾಗಬಹುದು.

೮. ಆಪತ್ಕಾಲಿಕ ಹಕ್ಕು :– ಕಾರಣಾಂತರಗಳಿಂದ ಆಕಸ್ಮಾತ್ತಾಗಿ ಘಟಿಸಬಹುದಾದ ಅಡಚಣೆ, ಬೇನೆ, ಆಪತ್ತುಗಳಲ್ಲಿ ಸಹಾಯಕ ಸೌಕರ್ಯಗಳನ್ನೊದಗಿಸಬಹುದು.

**27. Explain the duties of a citizen. ನಾಗರಿಕನ ಕರ್ತವ್ಯಗಳನ್ನು ವಿವರಿಸಿರಿ.**

ಸರಕಾರಕ್ಕೆ ನಿಷ್ಠನಾಗಿದ್ದು ಆಡಳಿತೆಗೆ ಸಹಕಾರಿಯಾಗಿರಬೇಕು. ಸರಕಾರಿ ಕಾಯ್ದೆಗಳನ್ನು ಪಾಲಿಸಬೇಕು. ತೆರಿಗೆಗಳನ್ನು ಕೊಡಬೇಕು. ಸಮಯ ಬಂದಾಗ ಜ್ಯೂರರ ಹಾಗೂ ಅಸೆಸರರಾಗಿ ಸಹಾಯ ಮಾಡಬೇಕು. ಪರರ ಹಿತಕ್ಕಾಗಿ ದೇಶದ ಏಳಿಗೆಗಾಗಿ ದುಡಿಯಬೇಕು. ಎಲ್ಲರೊಡನೆ ಸಹಕಾರ, ತಾಳ್ಮೆ, ಪ್ರೀತಿಗಳಿಂದಿರಬೇಕು.

ಸಾರ್ವಜನಿಕ ಸ್ವಚ್ಛತೆಗೆ ಲಕ್ಷ್ಯಕೊಡಬೇಕು. ರೋಗರುಜಿನಗಳು ಹಬ್ಬಿದಾಗ ಕೈಲಾದಷ್ಟು ಸಹಕಾರನೀಡಬೇಕು.

ಚುನಾವಣೆ ಸಮಯ ಸಾರಾಸಾರ ವಿಚಾರಮಾಡಿ ಮತಗಳನ್ನು ಕೊಡಬೇಕು. ಜನಗಣನೆ ನಡೆಯುವಾಗ ಸಹಾಯವೀಯಬೇಕು.

ಸೈನ್ಯ ಭರತಿ ಒತ್ತಾಯದಿಂದ ನಡೆದಾಗ ಸೇರಿಕೊಳ್ಳಬೇಕು. ಬಡಬಗ್ಗರಕಡೆ ಕರುಣೆ ತೋರಿಸಬೇಕು.

ಮಕ್ಕಳಿಗೆ ವಯಸ್ಸಿಗೆ ಸರಿಯಾಗಿ ಶಿಕ್ಷಣ ಕೊಡಿಸಬೇಕು. ಗ್ರಾಮೋದ್ಧಾರ, ಕೈಗಾರಿಕೆ, ವಯಸ್ಕರ ಶಿಕ್ಷಣ ಮೊದಲಾದವುಗಳ ಕುರಿತು ಸಹಕಾರಿಯಾಗಿರಬೇಕು.

ಸಂಘ ಸಂಸ್ಥೆಗಳ ಹಾಗೂ ಇನ್ನಿತರ ವಿಷಯಗಳ ಕುರಿತು ತಮ್ಮ ಅಭಿಪ್ರಾಯವನ್ನು ಸಂಬಂಧ ಪಟ್ಟ ಅಧಿಕಾರಿ ವರ್ಗಕ್ಕೆ ಆಗಾಗ ವರದಿಕೊಡಬೇಕು. ಇತ್ಯಾದಿ.

**28. Distinguish between Rights and Duti-es of a citizen. ನಾಗರಿಕನ ಹಕ್ಕು ಕರ್ತವ್ಯಗಳ ಸಾಮ್ಯತೆ ಹೇಳಿರಿ.**

ಹೆಸರಲ್ಲಿ ಬೇರೆಯಾದರೂ ಹಕ್ಕುಗಳೇ ಕರ್ತವ್ಯಗಳಾಗಿಯೂ ಕರ್ತವ್ಯಗಳೇ ಹಕ್ಕುಗಳಾಗಿಯೂ ಒಂದಕ್ಕೊಂದು ನಿಕಟ ಸಂಬಂಧ ಪಿಟ್ಟುಕೊಂಡಿವೆ. ಪ್ರತಿಯೊಬ್ಬ ನಾಗರಿಕನಿಗೆ ಹಕ್ಕು ಕರ್ತವ್ಯಗಳೆರಡು ಇರಲೇಬೇಕು. ಅಂತೂ ಹಕ್ಕು ಕರ್ತವ್ಯಗಳೆರಡು ಒಂದೆ ದೇಹದ ಎರಡು ಕಣ್ಣುಗಳು.

**29. Who is an Alien? Explain his Rights and duties ಪರನಾಡಿಗನೆಂದರೆ ಯಾರು? ಅವನ ಹಕ್ಕು ಕರ್ತವ್ಯಗಳನ್ನು ವಿವರಿಸಿರಿ.**

ಪರನಾಡಿಗನೆಂದರೆ ದೇಶೀಯನಾಗರಿಕತೆ ಪಡೆಯದವ-ಅಂದರೆ ಪರದೇಶದ ನಾಗರಿಕ. ಒಂದು ಸ್ಥಳದಲ್ಲಿ ಕೆಲ ಕಾಲ ವಾಸಿಸುತ್ತ ಅವನು ಲೌಕಿಕ ಹಕ್ಕುಗಳನ್ನು ಮಾತ್ರ ಪಡೆಯುತ್ತಾನೆ. ನಾಗರಿಕನಂತೆ ರಾಜಕೀಯ ಹಕ್ಕುಗಳು ಅವನಿಗೆ ದೊರೆಯವು. ಆದರೆ ಕರ್ತವ್ಯಗಳ ಮಟ್ಟಿಗೆ ಇವನು ನಾಗರಿಕನಂತೆ ಪಾಲಿಸಬೇಕು. ನಾಗರಿಕ ಮತ್ತು ಪರನಾಡಿಗರೊಳಗೆ ಹಕ್ಕುಗಳಲ್ಲಿ ಮಾತ್ರ ಭೇದ. ಆದರೆ ಕರ್ತವ್ಯ ಒಂದೆ.

**30. What is Property? Give its importance and defects. ಆಸ್ತಿಎಂದರೇನು? ಅದರ ಪ್ರಾಮುಖ್ಯತೆ ಮತ್ತು ದೋಷಗಳನ್ನು ಹೇಳಿರಿ.**

ಭವಿಷ್ಯತ್ ಕಾಲದ ಭದ್ರತೆ ಮತ್ತು ಸಹಕಾರಗಳಿಗಾಗಿ ಆಪತ್ಕಾಲದ ಉಪಯೋಗಕ್ಕಾಗಿ ಆಸ್ತಿ ಎಲ್ಲರಿಗೂ ಅವಶ್ಯವಿದೆ. ಕುಟುಂಬ ಜೀವನದಲ್ಲಿ ಇದಕ್ಕೆ ಬಹು ಪ್ರಾಮುಖ್ಯತೆ ಇದೆ. ಆಸ್ತಿಯ ವಿಷಯದಲ್ಲಿ ಎಲ್ಲರಿಗೂ ಅನೇಕ ಹಕ್ಕುಗಳಿವೆ. ಸ್ವತಂತ್ರ ಜೀವನಕ್ಕೆ ಸಹಕಾರಿ, ಮತ್ತು ಕೊರತೆಗಳನ್ನು ಪೂರೈಸುತ್ತದೆ. ಆಪತ್ಕಾಲದಲ್ಲಿ ಉಪಯೋಗವಾಗುವುದು. ಉಳಿದ ನಿರುದ್ಯೋಗಿಗಳಿಗೆ ಕೆಲಸ ದೊರೆಯುವುದು

ಹಾನಿ :– ಭೇದಭಾವ ಹುಟ್ಟುವುದು. ಶ್ರೀಮಂತರು ಮುಷ್ಟಿಗಳಿಗೆ ಬಲಿಪಟ್ಟು ದುಂದುಗಾರರಾಗುತ್ತಾರೆ. ಮಕ್ಕಳು ಕೆಡುತ್ತಾರೆ. ಪರಾವಲಂಬನ ಬೆಳೆಯುವುದು. ಹೆಮ್ಮೆ, ಗರ್ವ, ಅಧಿಕಾರಗಳ ಕುರಿತು ಶ್ರೀಮಂತರು ಬಡವರ ಮೇಲೆ ಹಿಂಸೆ ನಡೆಸುತ್ತಾರೆ. ಸಂಪತ್ತಿದ್ದವರೇ ಸುಖಿಸುವರು.

ದರ್ಜದ ಮೇಲೆ ಒತ್ತಾಯದ ಕೆಲಸಗಳಾಗುತ್ತವೆ. ಅಂತೂ ಆಸ್ತಿ ಎಲ್ಲ ರೀತಿಯಿಂದ ಶಾಂತಿಗೆ ಪ್ರಗತಿಗೆ ತಡೆಯಾಗಿದೆ.

31. Explain the Future of the Property.
**ಆಸ್ತಿಯ ಭವಿತವ್ಯ ವಿವರಿಸಿರಿ.**

ಸರಕಾರವು ಕೆಲ ಅವಶ್ಯ ಸುಧಾರಣೆ ಮಾಡಬೇಕು. ಸಂಪಾದನೆ ಮೇಲೆ ಕೆಲ ನಿರ್ಬಂಧಗಳಿರಬೇಕು. ಪ್ರತಿಯೊಬ್ಬನಿಗೂ ಅವಶ್ಯವಿರುವ ಆಸ್ತಿಗಿಂತ ಹೆಚ್ಚಿನದನ್ನು ಸರಕಾರವು ಸ್ವಾಧೀನ ಪಡಿಸಿಕೊಳ್ಳಬೇಕು. ಹಣವಂತರಿಂದ ಹೆಚ್ಚು ಹೆಚ್ಚು ಕರ–ತೆರಿಗೆ ವಸೂಲಿ ಮಾಡಬೇಕು. ಸಾಮಾಜಿಕ ಹಿತ ದೃಷ್ಟಿಯಿಂದ ಆಸ್ತಿಯ ಮೇಲೆ ವಿವಿಧ ಸುಧಾರಣೆಗಳಾಗಬೇಕು. ( ಈ ವಿಷಯದಲ್ಲಿ ಸಮತಾವಾದಿಗಳ ಸೂತ್ರ ಒಪ್ಪತಕ್ಕದ್ದು. )

32. Write short notes on :– 1) Private property, 2 Evolution of property, 3) Forms of Property, 4) Rights of Property 5) Family and Property.

**ಟಿಪ್ಪಣಿ ಬರೆಯಿರಿ :—**

**೧. ಖಾಸಗಿ ಆಸ್ತಿ :–** ಮನುಷ್ಯನು ತನ್ನ ಆಪತ್ಕಾಲಕ್ಕೆಂದು ಗಳಿಕೆಯ ಕೆಲ ಭಾಗವನ್ನು ಕಾದಿರಿಸುವನು. ಇದೇ ಆಸ್ತಿ. ಇದು ಭೂಮಿ, ಹಣ, ಆಭರಣಗಳ ಮೇಲಿರುವುದು. ಈ ಅವನ ಸ್ವತಃ ಆಸ್ತಿಯನ್ನವನು ಬೇಕಾದ ಹಾಗೆ ಉಪಯೋಗಿಸಬಹುದು. ಅದರ ಎಲ್ಲ ಅಧಿಕಾರ ಅವನಿಗಿದೆ. ಈ ಖಾಸಗಿ ಆಸ್ತಿ ಮಾನವ ಜೀವನದಲ್ಲಿ ಅತಿ ಸಹಕಾರಿಯಾಗಿದೆ.

**೨. ಆಸ್ತಿಯ ವಿಕಸನ :–** ಪ್ರಾಚೀನ ಕಾಲದಲ್ಲಿ ಆಸ್ತಿಯೆಂದರೆ ದನಕರು, ಉಡುಗೆ ತೊಡಿಗೆಗಳಾಗಿದ್ದುವು. ಕ್ರಮೇಣ ಮಾನವನು ಸುಸಂಸ್ಕೃತಿಯ ಹಾದಿ ಹಿಡಿಯ ಹತ್ತಿದಂತೆ ಆಸ್ತಿಯ ರೂಪವಾದರೂ ಕಾಲಾನುಸಾರ ಬದಲಾಗುತ್ತ ಹೋಯಿತು. ಇದೀಗ ಭೂಮಿಗೆ ಆಸ್ತಿಯ ರೂಪವಿದೆ. ಸಿರಿವಂತರೆಲ್ಲರೂ ಭೂಮಿಯ ರೂಪದಲ್ಲಿ ಆಸ್ತಿಯನ್ನು ಕಾಪಾಡಿಕೊಳ್ಳುತ್ತಿದ್ದಾರೆ.

೩. ಆಸ್ತಿಯ ವಿಧಗಳು :– ಆಸ್ತಿಯನ್ನು ಮೂರು ವಿಧದಲ್ಲಿ ವಿಭಾಗ ಮಾಡಬಹುದು. (೧) ಸರಕಾರಿ ಇಲ್ಲವೆ ಖಾಸಗಿ, ಇನ್ನಿತರ ಸಂಘಸಂಸ್ಥೆಗಳಿಗೆ ಸಂಬಂಧ ಪಟ್ಟ ಆಸ್ತಿಗೆ ಸಾಂಘಿಕ ಆಸ್ತಿ ( Collective ) ಎಂದೂ (೨) ಒಂದು ಸಮೂಹಕ್ಕೆ ಸಂಬಂಧ ಪಟ್ಟ ಆಸ್ತಿಗೆ ಸಾಮೂಹಿಕ ಆಸ್ತಿ ( Common ) ಎಂದೂ, (೩) ವ್ಯಕ್ತಿಗೆ ಪೂರ್ಣ ಅಧೀನವಿರುವ ಅವನ ಸ್ವಂತ ಆಸ್ತಿಗೆ ವೈಯುಕ್ತಿಕ ಆಸ್ತಿ ( Individual ) ಎಂದೂ ಹೇಳುವರು.

೪. ಆಸ್ತಿಯ ಹಕ್ಕು :– ಆಸ್ತಿಯನ್ನು ಸಂಪಾದಿಸುವುದು, ವಿನಿಯೋಗಿಸುವುದು, ಉಯಿಲು ಕರಾರುಗಳ ಮೇಲೆ ಬೇರೆಯವರಿಗೆ ಬಿಡುವುದು, ಕಾಣಿಕೆಯಾಗಿ, ದಾನವಾಗಿ ಬೇರೆಯವರಿಗೆ ಕೊಡುವುದು, ಮಾರಾಟ ಮಾಡುವುದು, ಸುನಸ್ಸಂತತಿ ಹಕ್ಕನ್ನು ಬೇರೆಯವರಿಗೆ ಬಿಡುವುದು–ಇತ್ಯಾದಿ ಆಸ್ತಿಗೆ ಅನೇಕ ಹಕ್ಕುಗಳಿವೆ.

೫. ಕುಟುಂಬ ಮತ್ತು ಆಸ್ತಿ :– ಮಾನವನು ಏಕಾಕಿಯಿದ್ದರೆ ಅವನಿಗೆ ಆಸ್ತಿಯ ಮಹತ್ವವೇನು ? ಆದರೆ ಅವನು ಸಂಸಾರದಲ್ಲಿ ಕಾಲಿಟ್ಟನೆಂದರೆ ಪ್ರಪಂಚವು ವಿಸ್ತೃತ ಹೊಂದಿ ಎಷ್ಟೋ ತಗ್ಗು ತಡೆಗಳು ಬರುವುದರಿಂದ ಅವುಗಳ ಪೂರೈಕೆಗೆ ಹಣದ ಅಡಚಣೆ ಬರುತ್ತದೆ. ಆದ್ದರಿಂದ ಕುಟುಂಬ ಜೀವನಕ್ಕೂ ಆಸ್ತಿಗೂ ತುಂಬ ಸಂಬಂಧವಿದೆ.

**33. What do you Know about society? Explain the relationship between person and society. ನಿಮಗೆ " ಸಮಾಜ "ದ ಕುರಿತು ಗೊತ್ತಿರುವುದೇನು ? ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧ ವಿವರಿಸಿರಿ.**

ಎಲ್ಲರೂ ಸಮಾಜದಲ್ಲಿ ಹುಟ್ಟಿ ಬೆಳೆಯುವರು ( ಕುಟುಂಬದ ವಿವರವನ್ನು ವಿವರಿಸಿರಿ )—ಅನೇಕ ಕುಟುಂಬ—ವ್ಯಕ್ತಿಗಳ ಸಮೂಹವೇ ಸಮಾಜ. ಮಾನವನು ಪರಾವಲಂಬನವಿಲ್ಲದೇ ಎಂದಿಗೂ ಜೀವಿಸನು ಮತ್ತು ಸುಸಂಸ್ಕೃತನೆನಿಸುವುದಿಲ್ಲ. ಅಂತೂ ಅವನು ಸಮಾಜವಿಲ್ಲದೇ ಜೀವಿಸಲು ಸಾಧ್ಯವಿಲ್ಲ.

ಸಮಾಜನಾದರೂ ವ್ಯಕ್ತಿಗಳಿಲ್ಲದೆ ಉಳಿದೀತೆ ? ವ್ಯಕ್ತಿ, ವ್ಯಕ್ತಿಗಳಿಂದಲೇ ಸಮಾಜ–ಸಮಾಜದಿಂದಲೇ ವ್ಯಕ್ತಿ. ಹೀಗೆ ಎರಡೂ ಒಂದಕ್ಕೊಂದು ಹೊಂದಿಕೊಂಡಿವೆ.

**34. What is the meaning of social law? Give their different forms- ಸಮಾಜ ನೀತಿಎಂದರೇನು ? ಅದರ ವಿವಿಧ ಸ್ವರೂಪವನ್ನು ಹೇಳಿರಿ.**

ಸಮಾಜವು ಕೆಲ ವಿಶಿಷ್ಟ ಕಟ್ಟಳೆಗಳಿಗೊಳಪಟ್ಟು ರಚಿತವಾಗಿದೆ ಇಲ್ಲದಿದ್ದರೆ ಸಮಾಜದಲ್ಲಿ ಶಿಸ್ತು, ಶಾಂತಿ ಇರುತ್ತಿರಲಿಲ್ಲ. ಜನರು ನಾಗರಿಕರೆನಿಸಿಕೊಳ್ಳಲೂ ಯೋಗ್ಯರಾಗಿರುತ್ತಿಲ್ಲ ಎಲ್ಲರೂ ಮನಬಂದಂತೆ ವರ್ತಿಸಿ ಪಶುಗಳ ಜೀವನದಂತೆ ಮಾನವ ಜೀವನವಾಗುತ್ತಿತ್ತು. ಸಮಾಜವಾದರೂ ವಿಸ್ತೃತವಾಗುತ್ತಿರಲಿಲ್ಲ. ಇಂತಹ ನೀತಿಗೆ ವಿರೋಧವಾಗಿ ವರ್ತಿಸಿದರೂ ಅಂತವರನ್ನು ಸಮಾಜ ವಿರೋಧಿಸಿ, ಶಿಕ್ಷಿಸುವುದು.

**ನೀತಿಯ ಸ್ವರೂಪಗಳು :- ೧.** ಸಂಪ್ರದಾಯ ( Custom ) ಸಮಾಜದ ಅನೇಕ ನಿರ್ಬಂಧ, ರೂಢಿ, ನಿಯಮಗಳೇ ಸಂಪ್ರದಾಯ. ಇದು ವೈಯಕ್ತಿಕವಾಗಿರದೆ ಸಮಾಜ ಹಿತ ದೃಷ್ಟಿಯಿಂದ ರಚಿತವಾಗಿದೆ. ಇದನ್ನು ಯಾವ ಗ್ರಂಥದಲ್ಲೂ, ಯಾರೂ ಬರೆದುದಾಗಿರದೆ, ವ್ಯಕ್ತಿಯ ಆಚರಣೆಯಿಂದಲೆ ಹುಟ್ಟಿಕೊಂಡವು. ಈ ಸಂಪ್ರದಾಯಗಳು ವಿವಿಧ ಜಾತಿಗಳಲ್ಲಿ ವಿವಿಧ ರೂಪದಲ್ಲಿವೆ. ಅಲ್ಲದೆ ಪರಿಸ್ಥಿತಿಗನುಗುಣವಾಗಿ ಬದಲೂ ಆಗುತ್ತವೆ.

**೨. ಕಾಯ್ದೆ** ( Law ) ಸಂಪ್ರದಾಯಕ್ಕಿಂತ ಕಾಯ್ದೆ ಬೇರೆಯು. ಇದನ್ನು ಅಧಿಕಾರದಲ್ಲಿರುವ ಸರಕಾರವು ಸಮಾಜ ಹಿತಕ್ಕಾಗಿ, ವ್ಯಕ್ತಿಗಳಿಗೆ ನ್ಯಾಯ ದೊರೆಯಲು, ಅಪರಾಧಿಗಳನ್ನು ಶಿಕ್ಷಿಸುವುದಕ್ಕಾಗಿಯೂ ರಚಿಸುತ್ತದೆ. ಕಾಯ್ದೆಗೆ ವಿರೋಧವಾಗಿ ನಡೆದರೆ ಶಿಕ್ಷೆಯು ಕಾದಿಟ್ಟಿದ್ದು. ಅಪರಾಧವನ್ನು ಗೊತ್ತು ಮಾಡುವದಾದರೂ ಈ ಕಾಯ್ದೆಗಳೆ.

**೩. ನೀತಿ ತತ್ವಗಳು** ( Morality ) ತನ್ನ ಮತ್ತು ತನ್ನ ಕುಟುಂಬದ ಹಿತಕ್ಕಾಗಿ ಬಹಳವಾಗಿ ವಿಚಾರ ಮಾಡಿ ಪ್ರತಿಯೊಬ್ಬನೂ ಒಂದೊಂದು ನೀತಿವಾದವನ್ನನುಸರಿಸುವರು. ಈ ನೀತಿವಾದಗಳು ಒಬ್ಬನಿಂದ ಒಬ್ಬನಿಗೆ ಹರಡುತ್ತ ಪ್ರಚಾರವಾಗುವವು ಹಾಗೂ ಬೆಳೆಯುವವು. ಅಜ್ಞಾನಿಗಳಿಗೆ, ಕಿರಿಯರಿಗೆ ಮಾರ್ಗದರ್ಶನ ಹಾಗೂ ಕಾಯ್ದೆಗಳಿಗೆ ತಳಹದಿಯಾದರೂ ಈ ನೀತಿ ತತ್ವಗಳೇ.

35. Explain the different forms of Government and Give their advantages and disadvantages. ಸರಕಾರದ ಪ್ರಭೇದ ಹಾಗೂ ಅವುಗಳ ಹಾನಿಗಳನ್ನು ವಿವರಿಸಿರಿ.

೧. ರಾಜ ಪ್ರಭುತ್ವ ( Monarchy ) ಒಬ್ಬನೇ ರಾಜ್ಯದ ಎಲ್ಲ ಸೂತ್ರಗಳನ್ನು ಕೈಗೆ ತೆಗೆದುಕೊಂಡು ತಾನೆ "ಪ್ರಭು" ಎಂದಾಳುವುದು. ನಿರಂಕುಶ ಪ್ರಭುವಾಗಿದ್ದರೆ ತನ್ನ ಸ್ವೈಯಕ್ತಿಕವಾಗಿಯೊ, ಜನರಿಂದ ಆರಿಸಲ್ಪಟ್ಟ ಪ್ರಭುವಾಗಿದ್ದರೆ ರಾಜ್ಯ ಘಟನೆಗೆ ಅಧೀನವಾಗಿಯೂ ನಡೆಯುವುದು. ಈ ಪದ್ಧತಿ ವಂಶ ಪಾರಂಪರ್ಯ ನಡೆಯುವುದು ಹೆಚ್ಚು.

**ಲಾಭ :–** ಒಬ್ಬನ ಚಿತ್ತದಂತೆ, ಒಂದೇ ಬಗೆಯ ಧೋರಣೆಯಿಂದ ರಾಜ್ಯಭಾರ ನಡೆಯುವುದು. ಕಾರಭಾರದ ವೆಚ್ಚವನ್ನು ನಿಯಂತ್ರಿಸಬಹುದು. ಆಕಸ್ಮಿಕ ಪರಿಸ್ಥಿತಿಗಳಲ್ಲಿ ಅವಸರದ ಧೋರಣೆ ವಹಿಸಲು ಸಹಕಾರವಾಗುತ್ತದೆ. ತನ್ನ ಮನೆತನವೆ ಮುಂದೆಯೂ ಅಧಿಕಾರದಲ್ಲಿರಬೇಕೆಂದು ರಾಜರಾದವರು ಬಹು ಜಾಗರೂಕತೆಯಿಂದ, ಜನಹಿತದೃಷ್ಟಿಯಿಂದ ವ್ಯವಹಾರ ಸಾಗಿಸುತ್ತಾರೆ.

**ಹಾನಿಗಳು :–** ಇಂತಹ ಪದ್ಧತಿಯಿಂದ ಜನರ ಇಚ್ಛೆಗೆ ...ನ್ನಣೆ ದೊರೆಯುವುದೆಂದು ಹೇಳಲಾಗದು. ವಂಶ ಪರಂಪರೆಯಿಂದ ಅಧಿಕಾರ ಹೋಗುವುದರಿಂದ ರಾಜ್ಯ ತಮಗೆ ಕಟ್ಟಿಟ್ಟದ್ದೆಂದು ರಾಜರು ಆಲಸಿಗಳಾಗುವುದೂ ಇದೆ. ನಾಗರಿಕ ಸ್ವಾತಂತ್ರ್ಯಕ್ಕೆ ಧಕ್ಕೆಯುದ್ದು, ಸರ್ವಾಧಿಕಾರಿಯಾದವನು ತಾನು ಮಾಡಿದ್ದೆ ಸರಿಯೆನ್ನಬಹುದು. ತನ್ನ ವಾಕ್ಯವೆ ವೇದವಾಕ್ಯವೆಂದು ತಿಳಿಯಬಹುದು ಇದರಿಂದ ಸಮಾಜ ನೀತಿಗೂ ಧಕ್ಕೆ ಇದೆ.

೨. ಉತ್ತಮರ ಪ್ರಭುತ್ವ ( Airstocracy ) ಬುದ್ಧಿವಂತರೂ, ಜಾಣರೂ ಆದ ಸುಶಿಕ್ಷಿತ ಜನರ ಕೈಯಲ್ಲಿ ರಾಜ್ಯಾಧಿಕಾರವಿರುವುದು.

**ಲಾಭ :–** ಇಂತಹ ಪದ್ಧತಿಯಿಂದ ರಾಜ್ಯವು ನಾಗರಿಕತೆಯ ಮಟ್ಟ ಏರುವುದು. ಶಿಕ್ಷಣಕ್ಕೆ ಮಹತ್ವ ಬರುವುದು. ಎಲ್ಲ ಕಾರ್ಯಭಾರ ಜಾಗರೂಕತನದಿಂದ, ನಿಯಂತ್ರಿಸಲ್ಪಟ್ಟು ನಡೆಯಬಹುದು.

**ಹಾನಿ:**– ಜಾಣರಾದರೂ ಅಧಿಕಾರ ಕೈಗೆ ಬಂದಮೇಲೆ ಮನಬಂದಂತೆ ವರ್ತಿಸುವ ಸಂಭವವೂ ಇದೆ. ಅವರು ಅಧಿಕಾರ ದುರುಪಯೋಗ ಮಾಡ ಬಹುದು. ಇದಲ್ಲದೆ ಅಜ್ಞಾನಿಗಳಿಗೆ ಮಹತ್ವ ದೊರೆಯದು.

**೩. ಪ್ರಜಾ ಪ್ರಭುತ್ವ** (Democracy) ಜನತೆಯ ಕೈಯಲ್ಲಿ ರಾಜ್ಯಾಧಿಕಾರವಿರುವುದು. ಇದರಲ್ಲಿ ಸಮತೆ ಮತ್ತು ಸ್ವಾತಂತ್ರ್ಯಕ್ಕೆ ಮಹತ್ವ ವಿದೆ. ಆಳುವ ಮತ್ತು ಆಳಲ್ಪಡುವವರು ಪ್ರಜೆಗಳೆ.

**ಲಾಭಗಳು:**– ಪ್ರತಿಯೊಬ್ಬನಿಗೂ ತನ್ನ ಕರ್ತವ್ಯ ಪಾಲಿಸಲು ಅವ ಕಾಶ ದೊರೆಯುತ್ತ. ಸಮತಾವಾದದಿಂದ ಕಾರ್ಯ ನಡೆದು ರಾಷ್ಟ್ರದಲ್ಲಿ ಒಮ್ಮತ, ಒಕ್ಕಟ್ಟು ಬೆಳೆಯಲು ಸಾಧ್ಯವಿದೆ. ದೇಶ ಪ್ರೇಮವೂ ಸ್ವಾತಂತ್ರ್ಯ ಪ್ರಿಯತೆಯೂ ಎಲ್ಲರಲ್ಲೂ ಮೂಡುತ್ತದೆ.

**ಹಾನಿಗಳು:**– ನಾಗರಿಕರು ಸಾರಾಸಾರ ವಿಚಾರಿಸಿ ಮತಗಳನ್ನು ಕೊಡದಿದ್ದರೆ ಕೆಟ್ಟ ಜನರೇ ಅಧಿಕಾರಕ್ಕೆ ಬಂದು (ಮಂಗನ ಕೈಗೆ ಮಾಣಿಕ್ಯ ದೊರೆತಂತೆ) ವಿವಿಧ ಮನೋಭಾವದ ಜನರ ಅಭಿಪ್ರಾಯಗಳು ಬೇರೆ ಬೇರೆ ಯಾಗಿ ಪರಿಸ್ಥಿತಿ ಕೆಡಬಹುದು. ಆಕಸ್ಮಿಕ ಪರಿಸ್ಥಿತಿಗಳಲ್ಲಿ ಘೋರಣೆ ವಹಿ ಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಪ್ರಜಾಪ್ರಭುತ್ವದ ಅಡಿಗಲ್ಲು 'ಮತದಾನ'ದ ಮೇಲೆ ಅವಲಂಬಿಸಿದೆ.

ಪ್ರಜೆಗಳು ಆರಿಸುವ ಪ್ರತಿನಿಧಿಗಳಿಂದ ರಾಜ್ಯಭಾರ ನಡೆಯುವುದು. ಜನರ ಅಭಿಪ್ರಾಯಕ್ಕೆ ಬೆಂಬಲವಿದೆ. ಶಾಸನ ಮಂಡಲಕ್ಕೆ ಕಾರ್ಯ[illegible] ಸಮಿತಿಯು ಪೂರ್ಣ ಅಧಿಕಾರವಿದ್ದು ಒಮ್ಮತದಿಂದ ಕೆಲಸ ಸಾ[illegible]ಬೇಕು. ಕಾಯಿದೆ ವಿಧಾಯಕ ಸಭೆಯವರಾದರೂ ಜನರ ಪ್ರತಿನಿಧಿಯವರಾ[illegible]ತ್ರಿ ಗಳು ಕೂಡಿಯೇ ಅಧಿಕಾರ ಪಡೆದು ಕೂಡಿಯೇ ಬಿಡಬೇಕಾಗುತ್ತದೆ. ಪ್ರತಿ ಯೊಂದು ಕೆಲಸಕ್ಕೆ ಪ್ರತಿಯೊಬ್ಬನೂ ಹೊಣೆಗಾರನಿದ್ದು, ಅ[illegible]ಗಲಿ, ಗವ್ಹರ್ನರನಾಗಲಿ ಮಂತ್ರಿ ಮಂಡಲಕ್ಕೆ ಅಧೀನನಿರುವನು. [illegible]ಸನ ಮಂಡಲವು ಪ್ರಜೆಗಳ ಅಭಿಪ್ರಾಯವನ್ನು ರೂಪಗೊಡುವುದು. ಜ[illegible]ಯೂ ಮತದಾನಕ್ಕೆ ಮಹತ್ವವಿದೆ

36. Explain the different forms and merits of Modern Government. ಆಧುನಿಕ ಸರಕಾರದ ಬಗ್ಗೆ, ಮತ್ತು ಲಕ್ಷಣ ಹೇಳಿರಿ.

೧. ಸರ್ವಾಧಿಕಾರಿತ್ವ ( Dictatorship )

See Answer 35 —(1) Monarchy

**೨. ಹೊಣೆಗಾರ ಸರಕಾರ** ( Responsible ) ಪ್ರಜೆಗಳು ಆರಿಸುವ ಪ್ರತಿನಿಧಿಗಳಿಂದ ರಾಜ್ಯಭಾರ ನಡೆಯುವದು. ಜನರ ಅಭಿಪ್ರಾಯಕ್ಕೆ ಬೆಂಬಲವಿದೆ. ಶಾಸನ ಮಂಡಲಕ್ಕೆ ಕಾರ್ಯಕಾರೀ ಸಮಿತಿಯು ಪೂರ್ಣ ಅಧಿಕಾರವಿದ್ದು ಒಮ್ಮತದಿಂದ ಕೆಲಸ ಸಾಗಿಸಬೇಕು. ಕಾಯಿದೆ ವಿಧಾಯಕ ಸಭೆಯಾದರೂ ಜನರ ಪ್ರತಿನಿಧಿಯಾಗಿದ್ದು ಮಂತ್ರಿಗಳು ಕೂಡಿಯೇ ಅಧಿಕಾರ ಪಡೆದು ಕೂಡಿಯೆ ಬಿಡಬೇಕಾಗುತ್ತದೆ. ಪ್ರತಿಯೊಂದು ಕೆಲಸಕ್ಕೆ ಪ್ರತಿಯೊಬ್ಬನೂ ಹೊಣೆಗಾರನಿದ್ದು, ಅರಸನಾಗಲಿ, ಗವ್ಹರ್ನರನಾಗಲಿ ಮಂತ್ರಿ ಮಂಡಲಕ್ಕೆ ಅಧೀನನಿರುವನು. ಶಾಸನ ಮಂಡಲವು ಪ್ರಜೆಗಳ ಅಭಿಪ್ರಾಯವನ್ನು ಹೊರಗೆಡಹುವುದು. ಇಲ್ಲಿಯೂ ಮತದಾನಕ್ಕೆ ಮಹತ್ವವಿದೆ.

**೩. ಅಧ್ಯಕ್ಷೀಯ ಸರಕಾರ** ( Prsidential ) ತಮಗೆ ಯೋಗ್ಯ ಕಂಡವನೊಬ್ಬನನ್ನು ಪ್ರಜೆಗಳು ಚುನಾವಣೆಯಿಂದಾರಿಸಿ ಕಾರ್ಯಕಾರೀ ಶಾಖೆಯ ಅಧಿಕಾರವನ್ನು ಕೊಡುತ್ತಾರೆ. ಇವನು ೪ ವರ್ಷದ ವರೆಗೆ ಅಧಿಕಾರದಲ್ಲಿರುವನು. ಆದರೆ ಶಾಸನ ಮಂಡಲಕ್ಕೆ ಅಧೀನನಾಗಿರುವದಿಲ್ಲ. ರಾಜನ ಹಕ್ಕುಗಳೆಲ್ಲವೂ ಆವನಿಗಿವೆ. ತನ್ನ ಸಹಕಾರಕ್ಕೆ ಮಂತ್ರಿಮಂಡಲವೊಂದನ್ನು ರಚಿಸುವನು. ಕಾಯ್ದೆ ವಿಧಾಯಕ ಹಾಗೂ ಕಾರ್ಯಕಾರಿ ಶಾಖೆಗಳು ಸಮಾನವಾಗಿದ್ದು ಒಂದು ವೇಳೆ ಅವುಗಳ ನಡುವೆ ತಿಕ್ಕಾಟ ವುಂಟಾದರೆ ನ್ಯಾಯ ಶಾಖೆ ಅದನ್ನು ಬಗೆಹರಿಸುತ್ತದೆ.

ಯಾವುದೇ ಕಾರ್ಯವು ತೀವ್ರತೆಯಿಂದ ಕೈಗೂಡಿ ಒಂದು ನಿಶ್ಚಿತ ಧೋರಣೆ ವಹಿಸಲು ಸಹಕಾರಿ ಯಾಗಿದೆ.

ಆದರೆ ಕಾರ್ಯಕಾರಿ ಮತ್ತು ಕಾಯ್ದೆ ವಿಧಾಯಕ ಶಾಖೆಗಳಲ್ಲಿ ಸಹಕಾರ ವುಳಿಯದೆ ಹೋದಲ್ಲಿ ವಿಘ್ನಗಳುಂಟಾಗಿ ನಡುವೆ ತಿಕ್ಕಾಟಕ್ಕೆ ಆರಂಭವಾಗುವುದು. ಅಧಿಕಾರದಲ್ಲಿರುವವರೆಗೆ ಅಧ್ಯಕ್ಷನಿಗೆ ಯಾರೂ ನಿಯಂತ್ರಣ ಹಾಕಲಿಕ್ಕಿಲ್ಲವಾದ್ದರಿಂದ ಅವನು ಯೋಗ್ಯ ಸೂತ್ರದಂತೆ ನಡೆಯುವನೆಂದು ಹೇಳಲಾಗದು. ಅಲ್ಪ ಅವಧಿಯಲ್ಲೆ ಅವನ ಅಧಿಕಾರ ಹೋಗುವುದರಿಂದ ಅವನ ಧೋರಣೆಗಳು ಕೈಗೂಡದೆ ಹೋಗಬಹುದು. ನಂತರದಲ್ಲಿ ಬರುವ ಅಧ್ಯಕ್ಷನು ಅದೇ ನೀತಿಯನ್ನು ಪಾಲಿಸುವನೆನ್ನಲಾಗದು. ಇದರಿಂದ ಪರಿಸ್ಥಿತಿ ಬೇರೆಯಾಗಿ ಖರ್ಚು ಹೆಚ್ಚಾಗಬಹುದು.

**೪. ಏಕೀಕೃತ ಸರಕಾರ** ( Unitory ) ಕೇಂದ್ರದಲ್ಲಿಯೆ ಎಲ್ಲ ಅಧಿಕಾರಗಳ ಕೇಂದ್ರೀಕೃತವಾಗುತ್ತದೆ. ಪ್ರಾಂತಿಕ ಸರಕಾರಗಳು ಕೇಂದ್ರ ಸರಕಾರದ ಅಧೀನವಿದ್ದು ಕೇಂದ್ರ, ಪ್ರಾಂತಿಕ, ಸ್ಥಾನಿಕ ಸರಕಾರಗಳಲ್ಲಿ ಅಧಿಕಾರ ವಿತರಣೆ ಇರುವುದಿಲ್ಲ. ಕೇಂದ್ರ ಸರಕಾರದ ಪತಿಯಿಂದಲೆ ಎಲ್ಲ ಸೂತ್ರಗಳೂ ತ್ವರೆಯಿಂದ ಸಾಗಬಹುದು. ದೇಶವಾದ್ಯಂತ ಒಂದೇ ಮಾದರಿಯ ಶಾಸನವಿರುವುದು.

ಆದರೆ ವಿಶಾಲವಾದ ರಾಷ್ಟ್ರದಲ್ಲಿ, ದೂರ ದೂರದ ಪ್ರದೇಶಗಳ ಸಮಸ್ಯೆಗಳನ್ನು ಬಿಡಿಸಲು ಕೇಂದ್ರ ಸರಕಾರಕ್ಕೆ ಕಷ್ಟವಾಗುವುದು. ಸ್ಥಳಿಕ ಜನರಿಗೆ ಯಾವುದೇ ಕೆಲಸಕ್ಕೆ ಕೈ ಹಚ್ಚಲು ಆಸ್ಪದವಿಲ್ಲದೆ ಅವರು ದೇಶದ ವಿಷಯದಲ್ಲಿ ಔದಾಸೀನ ತಾಳುವರು.

**೫. ಲೋಕಪ್ರಿಯ ಸರಕಾರ** ( Popular ) ಇದು ಪ್ರಜೆಗಳಿಂದಲೇ ರಚಿತವಾಗಿ ನಿಯಮಿತ ಅವಧಿಯ ವರೆಗೆ ಅಧಿಕಾರ ನಡೆಸಿ ತದನಂತರ ಮತ್ತೆ ಪ್ರಜೆಗಳಿಂದಲೇ ಆರಿಸಿ ಬರುವ ಹೊಸ ಅಧಿಕಾರಿಗಳಿಗೆ ಕಾರ್ಯಭಾರ ಹೋಗುವುದು. ಇದಕ್ಕೆ ಜನತಾ ಸರಕಾರವೆಂದೂ ಹೇಳುವರು. ಇದರ ಲಾಭ ಹಾನಿಗಳು ಪ್ರಜಾಪ್ರಭುತ್ವದಂತೆಯೆ.

**೬. ಅಧಿಕಾರಿ ಸರಕಾರ** ( Bureaucratic ) [illegible]ದಲ್ಲಿ ವಿಶಿಷ್ಟ ಶಿಕ್ಷಣ ಪಡೆದು ನಿರ್ದಿಷ್ಟ ಪರೀಕ್ಷೆಗಳಲ್ಲಿ ತೇರ್ಗಡೆ [illegible], ಅನುಭವವಿರುವ ಅಧಿಕಾರಿಗಳು ಕಾರ್ಯಭಾ[illegible]ನ್ನು ಕೈಗೆ ತೆಗೆ[illegible]ವರು.

ಇಂತಹ ಅಧಿಕಾರಿಗಳ ಮಂಡಲವೇ ಇರುವುದು. ಅವರು ಒಬ್ಬರಿಗೊಬ್ಬರು ಹೊಣೆಗಾರರಿರುವರು. ಆದರೆ ಜನರ ಅಭಿಪ್ರಾಯಕ್ಕೆ ಮಾನ್ಯತೆ ಕೊಡಲಾರರು. ಇದರ ಲಾಭ ಹಾನಿಗಳು ಏಕೀಕೃತ ಸರಕಾರದಂತಿವೆ.

೭. **ಸಂಯುಕ್ತ ಸರಕಾರ** (Federation) ತಮ್ಮಿಂದಲೇ ಆರಿಸಲ್ಪಡುವ ಒಂದು ಸಂಯುಕ್ತ ಸಭೆಗೆ ಸ್ವತಂತ್ರ ರಾಜಕೀಯ ಘಟಕಗಳು ಅಧಿಕಾರವನ್ನು ಕೊಡುತ್ತವೆ. ಆದರೂ ಇಂತಹ ಘಟಕಗಳು ತಮ್ಮ ಪ್ರದೇಶದಲ್ಲಿ ಕೆಲ ವಿಶಿಷ್ಟ ಅಧಿಕಾರಗಳನ್ನು ಇರಿಸಿಕೊಳ್ಳುತ್ತವೆ. ಎಲ್ಲ ಘಟಕಗಳೂ ಸಂಯುಕ್ತ ಸರಕಾರದ ಆಡಳಿತೆಗೊಳಗಾಗಿ ರಾಷ್ಟ್ರದಲ್ಲೆಲ್ಲ ಒಂದೇ ರೀತಿಯ ಕಾಯ್ದೆ, ನೀತಿ ಇರುತ್ತದೆ. ಮತ್ತು ಪ್ರಜೆಗಳು ಘಟಕ ಹಾಗೂ ಸಂಯುಕ್ತ ಸರಕಾರಗಳೆರಡಕ್ಕೂ ನಿಷ್ಠರಾಗಿರಬೇಕು.

ಘಟಕಗಳಲ್ಲಿ ನಿಶ್ಚಿತ ಅಧಿಕಾರ ವಿತರಣೆ ಇದ್ದು ಘಟನೆಯು ಸುಲಭವಾಗಿ ಮಾರ್ಪಡಿಸಲು ಬಾರದಂತಿದ್ದು ಅದರ ಅರ್ಥ ವಿವರಣೆಗೆ ಸಂಯುಕ್ತ ನ್ಯಾಯಾಲಯವಿರಬೇಕು. ಘಟಕಗಳಿಗೆ ಆಂತರಿಕ ಆಡಳಿತೆಯಲ್ಲಿ ಸ್ವತಂತ್ರವಿದ್ದು ಇಡೀ ರಾಷ್ಟ್ರಕ್ಕೆ ಸಂಬಂಧವಾದ ವಿಷಯಗಳು ಸಂಯುಕ್ತ ಸರಕಾರದಿಂದ ಪೂರೈಸಲ್ಪಡುತ್ತವೆ. ರಾಷ್ಟ್ರೀಯ ಐಕ್ಯವಿರುತ್ತದೆ. ಅನೇಕ ಘಟಕಗಳು ಒಂದೆಡೆ ಕೂಡುವುದರಿಂದ ರಾಷ್ಟ್ರದ ಶಕ್ತಿ ಬೆಳೆಯುವುದು. ಮತ್ತು ಎಲ್ಲೆಡೆ ಒಂದೇ ನೀತಿ ಇರುವುದು. ಆದರೆ ಅಧಿಕಾರಿ ವರ್ಗಗಳು ಹೆಚ್ಚು ಬೇಕಾಗುವುದರಿಂದಲೂ, ಆಂತರಿಕ ವ್ಯವಹಾರದಲ್ಲಿ ಘಟಕಗಳು ಮನ ಬಂದಂತೆ ನಡೆಯುವದರಿಂದಲೂ ಆಡಳಿತೆ ಹೆಚ್ಚು ವಿಪರೀತ ಮತ್ತು ಮಾರ್ಗ ಸುಗಮವಾಗದು. ಇದೊಂದು ದ್ವಿದಲ ಪದ್ಧತಿಯೆನ್ನಲಡ್ಡಿಯಿಲ್ಲ. ಇದರಲ್ಲಿ ಅನಾಹುತ ಹುಟ್ಟುವುದೇ ಹೆಚ್ಚು.

**ಭಾರತದ ಪರಿಸ್ಥಿತಿಯಲ್ಲಿ** ಸಂಯುಕ್ತ ಸರಕಾರವು ನಮಗೆ ಯೋಗ್ಯವೆನಿಸಬೇಕು. ನಮ್ಮಲ್ಲಿನ ಮತಭೇದ, ಜಾತೀಯತೆ, ವಿವಿಧ ಆಚಾರ, ಸಾಂಪ್ರದಾಯ ಭಾಷೆಗಳಿರುವುದರಿಂದ ಸಮಾನ ನೀತಿ ವಹಿಸುವ ಸಂಯುಕ್ತ ಸರಕಾರವೇ ಒಳಿತು. ಅದು ಐಕ್ಯ ಸಾಧನೆಗೆ ಸಹಕಾರಿಯಾಗಿದೆ. ಭಾರತದ ಕ್ಷೇತ್ರವಾದರೂ ವಿಶಾಲವಿರುವುದರಿಂದಲೂ ಸಂಯುಕ್ತ ಸರಕಾರ ಭಾರತಕ್ಕೆ

ಯೋಗ್ಯವಾಗಿದೆಯೆಂದು ಎಲ್ಲ ರಾಜನೀತಿ ತಜ್ಞರ ಅಭಿಪ್ರಾಯ. ಘಟಿಸಾ ಸಮಿತಿಯಾದರೂ ಇದೇ ಅಭಿಪ್ರಾಯಕ್ಕೆ ಮಾನ್ಯತೆ ಕೊಟ್ಟಿದೆ.

೮. ತಾತ್ಪೂರ್ತಿಕ ಸಂಯುಕ್ತ ಸರಕಾರ (Confederation)

ಕೆಲ ತಾತ್ಪೂರ್ತಿಕ ಸಮಸ್ಯೆಗಳಿಗಾಗಿ ಘಟಕಗಳು ಸಂಯುಕ್ತ ಮಂಡಲಕ್ಕೆ ಸೇರುತ್ತವೆ. ಹಾಗೂ ತಮ್ಮ ಧ್ಯೇಯ ಪೂರ್ತಿಯಾದೊಡನೆ ಹಿಂದಿನಂತೆ ವಿಭಜನೆಗೊಳ್ಳುತ್ತವೆ. ಇಲ್ಲಿ ಯಾವುದೇ ಘಟಕದ ಮೇಲೆ ನಿಯಂತ್ರಣವಿಲ್ಲ. ಬೇಕಾದಾಗ ಅದು ಸಂಯುಕ್ತ ಮಂಡಲವನ್ನು ಬಿಟ್ಟು ಹೋಗಬಹುದು. ಪ್ರತಿಯೊಂದು ಘಟಕಕ್ಕೂ ಇಲ್ಲಿ ಸಾರ್ವಭೌಮತ್ವ ಅಧಿಕಾರಗಳಿರುತ್ತವೆ. ಇದು ತಾತ್ಪೂರ್ತಿಕವಿರುವುದರಿಂದ ಹೆಚ್ಚಿನ ಲಾಭ ಹಾನಿಗಳೇನೂ ಕಾಣುವುದಿಲ್ಲ.

**37. Which is the good form of government as your idea? why? ನಿಮ್ಮ ಅಭಿಪ್ರಾಯದಂತೆ ಸರಕಾರದಲ್ಲಿನ ಉತ್ತಮ ಬಗೆ ಯಾವುದು? ಏಕೆ?**

ಪ್ರಜಾ ಪ್ರಭುತ್ವವೇ ಉತ್ತಮವೆನ್ನಬಹುದು. ಇದರಿಂದ ಎಷ್ಟೋ ಹಾನಿಗಳಿದ್ದರೂ ಅವನ್ನು ಸುಧಾರಿಸಿಕೊಳ್ಳಲು ಶಕ್ಯವಿದ್ದು ಅದರಲ್ಲಿ ಪ್ರತಿಯೊಬ್ಬ ಪ್ರಜೆಗೂ ಮಾನ್ಯತೆಯಿದೆ. ಪ್ರತಿ ವ್ಯಕ್ತಿಗೂ 'ತನ್ನ ದೇಶ' ಎಂಬ ಅಭಿಮಾನ ಹುಟ್ಟಿ ಅವನ ನೈತಿಕ, ಬೌದ್ಧಿಕ ವಿಕಾಸಗಳಿಗೆ ಎಡೆ ದೊರೆಯುವುದು. ಪರಿಸ್ಥಿತಿಗನುಸಾರ ಒಂದೊಂದು ರಾಷ್ಟ್ರಕ್ಕೆ ಒಂದೊಂದು ತರದ ಸರಕಾರ ಮಾನ್ಯವೆನಿಸಬಹುದು. ಆದರೆ ಸ್ವರಾಜ್ಯ ಸ್ಥಾಪನೆ ಎಲ್ಲದಕ್ಕೂ ಮಾನ್ಯವಾದದ್ದು ಮತ್ತು ಎಲ್ಲ ಹೊಣೆಯನ್ನು ಹೊರಬಲ್ಲದು. ಅದು ಇಡೀ ಸಮಾಜದ ಹಿತವನ್ನೆ ಬಯಸಿ ಕಾರ್ಯ ಸಾಗಿಸುತ್ತದೆ. ಜನರು ಚುನಾವಣೆ ಸಮಯದಲ್ಲಿ ತಮ್ಮ ಮತಗಳ ಮಹತ್ವವನ್ನು ತಿಳಿಯಬೇಕು.

**38. Which matters helps Democracy to become a good Government? ಪ್ರಜಾಪ್ರಭುತ್ವವು ಉತ್ತಮ ಸರಕಾರವೆನಿಸಲು ಯಾವ ಸಮಸ್ಯೆಗಳು ಸಹಕಾರಿಯಾಗಿವೆ?**

೧. **ಪಕ್ಷ ಪದ್ಧತಿ** ( Party system ) ರಾಜಕೀಯದಲ್ಲಿ ವಿವಿಧ ಭಾವನೆ, ಧೋರಣೆಗಳನ್ನೊಳಗೊಂಡ ವಿವಿಧ ಜನರ ಗುಂಪೇ ವಿವಿಧ ಪಕ್ಷಗಳೆನಿಸುವವು. ಜನರಿಗೆ ವಿವಿಧ ಪಕ್ಷಗಳ ಸೂತ್ರಗಳು ತಿಳಿದು ತಮಗೆ ಎನಿಸುವ ಪಕ್ಷವನ್ನೆ ಆರಿಸಲು ಅನುಕೂಲವಾಗುವುದು.

೨. **ವೃತ್ತ ಪತ್ರಿಕೆ** ( News Paper ) ಪತ್ರಿಕೆಗಳಿಂದ ಜನರನ್ನು ರಾಜಕೀಯದಲ್ಲಿ ಹುರಿದುಂಬಿಸಲೂ ಬೇಕಾದ ಜ್ಞಾನವನ್ನು ತಿಳಿಸಲೂ, ತರ್ಕವಿತರ್ಕ ಮಾಡಲೂ ಸಹಾಯವಾಗುತ್ತದೆ.

೩. **ವೇದಿಕೆ** ( Platform ) ವಿವಿಧ ಸಭೆಗಳಲ್ಲಿ ವಿವಿಧ ಪಕ್ಷಗಳ ಮುಖಂಡರು ಪಕ್ಷ ಪ್ರಚಾರ ಮಾಡಲಿಕ್ಕೂ, ತಮ್ಮ ಸೂತ್ರಗಳನ್ನು ಜನರೆದುರು ಇಡಲಿಕ್ಕೂ ಸಾಧ್ಯವಾಗುತ್ತದೆ.

೪. **ಸಾರ್ವಜನಿಕ ಮತ** ( Public Opinion ) ಸಾರ್ವಜನಿಕರು ಇಡಿಯ ಸಮಾಜದ ಬಗೆಗೆ ಪಡುವ ಅಭಿಪ್ರಾಯದ ಮೇಲಿಂದ ಪ್ರಜಾ ಪ್ರಭುತ್ವದ ಸೂತ್ರಗಳು ಹುಟ್ಟಿಕೊಳ್ಳುವವು. ಯಾವ ವಿಚಾರಕ್ಕೂ ಒತ್ತಾಯವಿಲ್ಲದೆ ಪ್ರತಿಯೊಬ್ಬನಲ್ಲೂ ವಿಚಾರ ಶಕ್ತಿ ಇರಬೇಕು. ಮತ್ತು ಹಿತದೃಷ್ಟಿಯಿಂದ ಅವು ಒಬ್ಬರಿಂದೊಬ್ಬರಿಗೆ ವಿಮರ್ಶಿಸಲ್ಪಟ್ಟು ಕೊನೆಗೆ ಸಾರ್ವಜನಿಕವಾಗುವವು. ಮತ್ತು ಇಷ್ಟೇ ಅಲ್ಲದೆ ಮತದಾನ, ಚುನಾವಣೆ ಪದ್ಧತಿ, ಪ್ರತಿನಿಧಿ ಮಂಡಲ, ಸಾಮಾಜಿಕ ಸಂಘಸಂಸ್ಥೆಗಳು ಕೂಡಾ ಪ್ರಜಾ ಪ್ರಭುತ್ವಕ್ಕೆ ಬೆಂಬಲವಾಗಿದೆ.

## 39. Give the Future of Democracy. ಪ್ರಜಾ ಪ್ರಭುತ್ವದ ಭವಿತವ್ಯ ಹೇಳಿರಿ

ಜನತೆಗಾಗಿ, ಜನಾಧಿಪತ್ಯಯುದಂತೆ, ಜನತೆಯಿಂದಲೇ ಆಳಲ್ಪಡುವ ಈ ಪದ್ಧತಿಗೆ ಉಜ್ವಲ ಭವಿತವ್ಯವಿದೆ. ಇದರಿಂದ ಸುಫಲಗಳೇ ದೊರೆಯುವವು. ರಾಷ್ಟ್ರವು ಉನ್ನತಿಗೇರಬಹುದು. ಆದರೆ ದೇಶದ ನಾಗರಿಕರ ಬೆನ್ನಮೇಲೆ ಪ್ರಜಾರಾಜ್ಯದ ಹೊರೆ ನಿಂತಿದೆ. ಅವರು ವಿಚಾರ ಮಾಡಿ ತಮ್ಮ ಕರ್ತವ್ಯ ಪಾಲಿಸುವುದರ ಜೊತೆಗೆ 'ಮತದಾನ'ದಲ್ಲಿ ಅವರ ಕರ್ತವ್ಯ ಬಹು ಮಹತ್ವದ್ದು. ಅವರು ಉತ್ತಮರನ್ನು—ಉತ್ತಮ ಪಕ್ಷವನ್ನು ಆರಿಸಿದರೆ ನಿಜವಾದ ಪ್ರಜಾರಾಜ್ಯದ ಸುಫಲವನ್ನುಣ್ಣಬಹುದು.

40. Write what yow Know about Constitution and its forms. **ರಾಜ್ಯಘಟನೆ ಮತ್ತು ಅದರ ತರಗಳ ಕುರಿತು ನಿಮಗೆ ಗೊತ್ತಿರುವುದನ್ನು ಬರೆಯಿರಿ.**

ರಾಜ್ಯಘಟನೆಯೆಂದರೆ, ಸರಕಾರವು ತನ್ನ ಮತ್ತು ಜನರ ಹಿತಕ್ಕಾಗಿ, ಹಕ್ಕು ಕರ್ತವ್ಯಗಳ ರಕ್ಷಣೆಗಾಗಿ ತಾನು ಮಾಡಲೆಳಸಿದ ಸಮಸ್ಯೆಗಳ ರಚನೆ, ಹಾಗೂ ತನ್ನ ಕರ್ತವ್ಯ, ಹಕ್ಕುಗಳನ್ನು ವಿಶದಪಡಿಸಿ ತನ್ನ ಹಾಗೂ ಜನತೆಯ ನಡುವಿನ ನಿಕಟ ಸಂಬಂಧವನ್ನು ವಿವರಿಸುವ ಸಾಧನೆಯಾಗಿದೆ. ಇದಕ್ಕೆ ರಾಜಕೀಯದ ಕರಡು ಎನ್ನಬಹುದು. ಇದಕ್ಕಣಿಯಾಗಿ ಕಾರ್ಯಭಾರ ಸಾಗುವುದು.

೧. **ಲಿಖಿತ ರಾಜ್ಯಘಟನೆ** ( Written ) ರಾಜ್ಯಘಟನೆಯು ಸೂತ್ರಗಳನ್ನು ಬರೆದಿಡುವುದಿದೆ. ಇದರಿಂದ ನಡುವೆ ಸಂಶಯಕ್ಕಾಗಲಿ, ತಿಕ್ಕಾಟಕ್ಕಾಗಲಿ ಆಸ್ಪದವಿರದೆ ಆ ಸೂತ್ರಗಳು ನಿರ್ದಿಷ್ಟವಾಗಿ ಉಳಿಯುತ್ತವೆ. ಮತ್ತು ನಾಗರಿಕರಿಗೂ ಅಭ್ಯಾಸ ಮಾಡಲನುವಾಗುತ್ತದೆ.

೨. **ಅಲಿಖಿತ ಘಟನೆ** ( Unwritten ) ಹೀಗೆ ಬರೆದಿಡದೆ ಸೂತ್ರಗಳನ್ನು ಸಂಪ್ರದಾಯ, ಪೂರ್ವೇತಿಹಾಸ, ನೀತಿಕಟ್ಟಲೆ, ಅರಿತವರ ಅಭಿಪ್ರಾಯಗಳ ಮೇಲಿನಿಂದ ನಿಶ್ಚಯಿಸಿ ಹೇಳುವುದು.

೩. **ಗಡಸು ಘಟನೆ** ( Rigid ) ಘಟನೆಯ ಸೂತ್ರಗಳನ್ನು ಬೇಕಾದಂತೆ ಬದಲು ಮಾಡಲು ಬಾರದೆ ಅವು ಬಿಗಿಯಾಗಿದ್ದರೆ ಗಡಸು ಘಟನೆ ಎನ್ನುವರು. ರಾಜ್ಯಕಾರಭಾರಕ್ಕೆ ಇದು ಲಿಖಿತ ಘಟನೆಯಂತೆ ಅತಿ ಉತ್ತಮ ವಿಧ.

೪. **ಮೃದು ಘಟನೆ** ( Flexible ) ಬೇಕಾದಾಗ ಬೇಕಾದಂತೆ ಸೂತ್ರಗಳನ್ನು ಮಾರ್ಪಡಿಸಲು ಬರುವುದು. ಮತ್ತು ಕಾಯಿದೆಗಳಂತೆ ಸಾಮಾನ್ಯ ರೀತಿಯಲ್ಲಿ ಇವನ್ನು ಬಿಡಿಸಬಹುದು. ಇದು ಉತ್ತಮ ವಿಧವಾಗಿರದೆ ಅಲಿಖಿತ ರಾಜ್ಯಘಟನೆಯಂತೆ ಪ್ರಾಶಸ್ತ್ಯವಿಲ್ಲ.

41. Write short Notes on : 1.) Election. 2. Electorate 3. Direct and Indirect election

4. Franchise. 5. Voter's responsibility. 6. Importance of a Vote. ಟಿಪ್ಪಣಿ ಬರೆಯಿರಿ.

೧. ಚುನಾವಣೆ :- ಮತದಾರರು ತಮ್ಮ ಮತಗಳನ್ನು ವಿಶಿಷ್ಟ ಉಮೇದ್ವಾರಿಗಳಿಗೆ ಕೊಟ್ಟು ವಿವಿಧ ಅಧಿಕಾರಿವರ್ಗ, ಪಕ್ಷ, ಮಂಡಲಗಳ ಕಾರ್ಯಸ್ಥ, ಅಧ್ಯಕ್ಷ ಮೊದಲಾದವರನ್ನು ಚುನಾವಣೆಯಿಂದ ಆರಿಸುತ್ತಾರೆ. ಚುನಾವಣೆಯೆಂದರೆ ಪ್ರತಿಯೊಬ್ಬನು ತನತನಗೆ ಯೋಗ್ಯ ಕಂಡ ಹುರಿಯಾಳುಗಳಿಗೆ ತನ್ನ ಮತವನ್ನು ಕೊಡುವುದು. ಒಟ್ಟಿನಮೇಲೆ ಮತಗಳನ್ನು ಎಣಿಸುವಾಗ ಹೆಚ್ಚು ಮತ ಬಿದ್ದವ, ಅಂದರೆ ಹೆಚ್ಚಿನ ಜನರ ಯೋಗ್ಯತೆಗೆ ಪಾತ್ರನಾದವ ಆರಿಸಿ ಬರುತ್ತಾನೆ.

೨. ಮತದಾರ ಸಂಘ :- ವಿಶಿಷ್ಟ ಚುನಾವಣೆಗಳಲ್ಲಿ ಮತದಾನ ಮಾಡುವ ಹಕ್ಕುಳ್ಳ ವಿಶಿಷ್ಟ ಗುಂಪಿಗೆ ಮತದಾರ ಸಂಘವೆನ್ನುವದು. ವಿಶಿಷ್ಟ ವಿಶಿಷ್ಟ ಗುಂಪುಗಳಿಗೆ ಬೇರೆ ಬೇರೆ ಮತದಾರ ಸಂಘಗಳಿರುತ್ತವೆ. ಅವುಗಳಲ್ಲಿ (೧) ಸಂಯುಕ್ತ ಮತದಾರರ ಸಂಘ (೨) ವಿಂಗಡ ಮತದಾರ ಸಂಘ ಎಂದಿರುತ್ತವೆ. ಸಂಯುಕ್ತ ಮತದಾರರ ಸಂಘದಲ್ಲಿ ಜಾತಿ, ವರ್ಗ; ಪಂಗಡಗಳ ಭೇದವಿಲ್ಲದೆ ಮತದಾರನು ತನಗೆ ಉಚಿತವೆನಿಸಿದ ಯಾವುದೇ ಉಮೇದ್ವಾರನಿಗೆ ಮತ ಕೊಡಬಹುದು. ಆದರೆ ವಿಂಗಡ ಮತದಾರ ಸಂಘದಲ್ಲಿ ವಿಶಿಷ್ಟ ಉಮೇದ್ವಾರಿಕೆಗೆ ಪ್ರತಿನಿಧಿತ್ವ ವಹಿಸಿ ಮತ ಕೊಡುವುದು. ಇದಲ್ಲದೆ ಜಾತೀಯ ಮತದಾರ ಸಂಘ, ಮಿಶ್ರಿತ ಮತದಾರ ಸಂಘ, ಉಚ್ಚ ಮತದಾರ ಸಂಘಗಳೆಂದಿರುತ್ತವೆ. ಆದರೆ ನಮ್ಮ ನೂತನ ಘಟನೆಯಲ್ಲಿ ಅವುಗಳಿಗೆ ಬೆಲೆಯಿಲ್ಲ.

೩. ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ಚುನಾವಣೆ :- ಹುರಿಯಾಳುಗಳನ್ನು ಪ್ರತ್ಯಕ್ಷವಾಗಿ (ತಮ್ಮ ಮನ ಕೊಪ್ಪಿದವರನ್ನು) ಆರಿಸುವುದು. ಇದರಿಂದ ಜನರಿಗೆ ಹುರಿಯಾಳುಗಳ ನೈಜ ಯೋಗ್ಯತೆಯನ್ನು ವಿಮರ್ಶಿಸಲು ಅನುವಾಗುತ್ತದೆ. ಬಾಯಿಬಡಿಕೆ, ಲಂಚಗೂಳಿತನಗಳಿಗೆ ಜನ ಮರುಳಾಗಲು ಎಡೆಯಿಲ್ಲ. ಅಪ್ರತ್ಯಕ್ಷ ಚುನಾವಣೆಯಲ್ಲಿ ಜನರು ಆರಿಸಿದ ಒಂದು ಸಂಘದ ಸದಸ್ಯರ ಇನ್ನೊಂದು ಸಂಸ್ಥೆಗಾಗಿ ತಮ್ಮೊಳಗೆ ಆರಿಸಿಕೊಂಡು ಸದಸ್ಯರನ್ನು

ಆರಿಸುವುದು. ಇದರಲ್ಲಿ ಸ್ವಾರ್ಥಕ್ಕೆ ಅನುವಾಗುವುದು. ಲಂಚಗೋಳಿತನ. ಬಾಯಿಮಾತುಗಳಿಗೆ ಕಡಿಮೆ ಇಲ್ಲ. ಇದರಿಂದ ಜನರಿಗೆ ಉಮೇದ್ವಾರರ ನೈಜ ಯೋಗ್ಯತೆ ಪರಾಂಭರಿಸುವ ಅವಕಾಶ ದೊರೆಯದು. ಇದರಿಂದ ತೀರಾ ಅಯೋಗ್ಯರೂ ಆರಿಸಿ ಬರಬಹುದು.

**೪. ಮತದಾನ ಹಕ್ಕು :–** ವಿಶಿಷ್ಟ ಯೋಗ್ಯತೆಯುಳ್ಳ ನಾಗರಿಕರಿಗೆ ವಿವಿಧ ಚುನಾವಣೆಗಳಲ್ಲಿ ಮತನೀಯಲು ಹಕ್ಕು ಇರುತ್ತದೆ. ಮತದಾರರು ಇಂತಹ ಯೋಗ್ಯತೆವುಳ್ಳವರಿರಲೇಬೇಕೆಂದು ಸರಕಾರ ಹೇಳುತ್ತದೆ. (ಮತದಾರರ ಯೋಗ್ಯತೆ ಮುಂದೆ ನೋಡಿ........)

**೫. ಮತದಾರರ ಹೊಣೆ:–** ತನ್ನ ಮತವು ಬಹು ಬೆಲೆಯುಳ್ಳದ್ದೆಂದೂ ಅದರಿಂದಲೆ ತನ್ನ ದೇಶದ ಭವಿತವ್ಯ ಅವಲಂಬಿಸಿದೆ ಎಂದೂ ತಿಳಿಯಬೇಕು. ವಿವಿಧ ಹುರಿಯಾಳುಗಳ ಯೋಗ್ಯತೆಯ ಸಾಂಗಸಾರ ವಿಚಾರಿಸಿ ತನ್ನ ಸ್ವೇಚ್ಛೆಯಂತೆ ಮತಗಳನ್ನು ಉಚಿತ ಕಂಡವರಿಗೆ ಕೊಡಬೇಕು. ಬೇರೆಯವರ ಮಾತನ್ನು ಎಂದೂ ಕಿವಿಗೆ ಹಾಕಿಕೊಳ್ಳಬಾರದು. ಅಲ್ಲದೆ ಪ್ರತಿ ಚುನಾವಣೆಯಲ್ಲೂ ಪ್ರತಿಯೊಬ್ಬನೂ ತನ್ನ ಮತಗಳನ್ನು ಕೊಡಲೇ ಬೇಕು.

**೬. ಮತದ ಮಹತ್ವ :–** ಕೇವಲ ಒಂದೇ ಒಂದು ಓಟಿನಿಂದ ಯೋಗ್ಯರೆನಿಸಿದವರು ಆರಿಸಿ ಬಾರದೆ ಹೋಗುವುದಿದೆ. ಎಲ್ಲರೂ ಉಚ್ಚರೀತಿಯಲ್ಲಿ ತಮ್ಮ ಮತಗಳನ್ನು ಉಪಯೋಗಿಸಿದರೆ ಉತ್ತಮರಿಗೆ ಆರಿಸಿ ಬರಲು ಸಾಧ್ಯವಾಗಿ ಉತ್ತಮ ಕಾರ್ಯಭಾರ ನಮಗೆ ಸಿಗಬಹುದು. ಆದ್ದರಿಂದ ಪ್ರತಿಯೊಂದು ಓಟಿಗೂ ಎಂತಹ ಮಹತ್ವವಿದೆಯೆಂದು ತಿಳಿಯಿರಿ.

**42. Explain the duties 2) responsibilities of Government. ಸರಕಾರದ ಕರ್ತವ್ಯ ಮತ್ತು ಹೊಣೆಗಾರಿಕೆಗಳನ್ನು ವಿವರಿಸಿರಿ.**

**ಖಡ್ಡಾಯ ಕರ್ತವ್ಯ :–** ದೇಶದ ಶಾಂತಿ, ಐಶ್ವರ್ಯ, ಹಕ್ಕುಗಳನ್ನು ಕಾಯುವುದು. ಪರರಿಂದ ಆಗಬಹುದಾದ ಕೇಡುಗಳನ್ನು ತಡೆಯುವುದು. ದಾಳಿಗಳನ್ನು ತಡೆಯುವುದು. ವ್ಯಕ್ತಿಗಳ ಸ್ವಾತಂತ್ರ್ಯ, ಹಕ್ಕುಗಳನ್ನು ಕಾಯುವುದು ದಂಗೆ ಚಳವಳಿಗಳನ್ನು ನಿರ್ಮೂಲ ಮಾಡಿ

ಆಂತರಿಕ ಶಾಂತಿ ಸ್ಥಾಪಿಸುವುದು. ಅಪರಾಧಗಳನ್ನು ಕಂಡು ಹಿಡಿದು ಶಿಕ್ಷಿಸುವುದು. ವ್ಯಾಜ್ಯ-ಕಲಹಗಳನ್ನು ನ್ಯಾಯದಿಂದ ತೀರಿಸುವುದು. ಕುಟುಂಬ ಸುಖಕ್ಕೆ, ಸಮಾಜ ಹಿತಕ್ಕೆ, ವಿಶಿಷ್ಟ ಸಂಬಂಧಗಳನ್ನು ಸ್ಪಷ್ಟ ಪಡಿಸುವುದು.

ಐಚ್ಛಿಕ ಕರ್ತವ್ಯಗಳು:- ಜನಹಿತಕ್ಕಾಗಿ ರೈಲ್ವೆ, ಅಂಚೆಖಾತೆ ಸಹಕಾರಿ ಸಂಘ, ಧರ್ಮಶಾಲೆ, ಶಿಕ್ಷಣ ಕೇಂದ್ರ, ಮನರಂಜನ ಗೃಹ, ಪ್ರದರ್ಶನಾಲಯ, ಆಸ್ಪತ್ರೆ ಮೊದಲಾದವುಗಳನ್ನು ರಚಿಸುವುದು. ಆಮದು ರಫ್ತು ಸರಕುಗಳಿಗೆ ಕರ ಹಾಕುವುದು. ನಾಣ್ಯ ರಚಿಸುವುದು. ವ್ಯಾಪಾರಕ್ಕೆ ಲೈಸನ್ಸು ಕೊಡುವುದು, ತೂಕ ಅಳತೆಗಳನ್ನು ಗೊತ್ತುಪಡಿಸುವುದು. ಸಾರ್ವಜನಿಕ ಆರೋಗ್ಯ, ಸ್ವಚ್ಛತೆಗಳಿಗಾಗಿ ಯತ್ನಿಸುವುದು. ಕಡ್ಡಾಯ ಶಿಕ್ಷಣ ಕೊಡಿಸುವುದು ಒಕ್ಕಲುತನದ ಸುಧಾರಣೆ ಧನಿಕರ ಮೇಲೆ ನಿಯಂತ್ರಣ ಹಾಕುವುದು ಇತ್ಯಾದಿ.

**43. What are the organs of Government? What are their functions? ಸರಕಾರದ ಅಂಗಗಳನ್ನು ಅವುಗಳ ಕಾರ್ಯಗಳನ್ನು ಹೇಳಿರಿ.**

**ಸರಕಾರದ ಅಂಗಗಳು ಒಟ್ಟು ಮೂರು ಎನ್ನಬಹುದು.**

೧. **ಕಾರ್ಯನಿರ್ವಾಹಕ ಶಾಖೆ** (Executive) ರಾಜಕೀಯ ಸಮಸ್ಯೆಗಳನ್ನು ನಿರ್ದಿಷ್ಟ ಪಡಿಸಿ ದೇಶದ ಶಾಂತತೆ, ಶಿಸ್ತು, ಹಿತಗಳನ್ನು ಸಾಧಿಸಲೆಳಸಿ ಆಡಳಿತೆಗೆ ಸಹಕಾರಿಯಾಗಿರುವುದು. ಶಾಸನ ಮಂಡಲದಲ್ಲಿ ಪಾಸಾದ ಕಾಯಿದೆಯನ್ನು ಜಾರಿಗೆ ತಂದು ರಾಷ್ಟ್ರಹಿತ ಸಾಧಿಸುವುದು. ಕೆಲ ಸಮಯ ಶಾಸನ ಸಭೆ ಕರೆಯುವ, ವಿಸರ್ಜಿಸುವ ಹಾಗೂ ಸುಗ್ರೀವಾಜ್ಞೆಗಳನ್ನು ಹೊರಡಿಸುವ ಅಧಿಕಾರವೂ ಇದಕ್ಕಿದೆ. ದೇಶದ ಕಾರ್ಯಭಾರಕ್ಕೆ ವಿಶಿಷ್ಟ ಅಧಿಕಾರಿಗಳನ್ನು ನೇಮಿಸುವುದು ಮತ್ತು ಅವರನ್ನು ನಿಯಂತ್ರಿಸುತ್ತದೆ. ಅಪರಾಧಿಗಳನ್ನು ಸಮಯಾನುಸಾರ ಕ್ಷಮಿಸುವ ಹಾಗೂ ಪರದೇಶದೊಡನೆ ಯುದ್ಧ ಸಾರುವ ಅಧಿಕಾರವಿದೆ. ಈ ಕಾರ್ಯಕಾರೀ ಮಂಡಲದ ಅಧಿಕಾರ ಮಂತ್ರಿ ಮಂಡಲದ ಕೈಜೋಡಣಿಗಳಲ್ಲಿ ಒಬ್ಬ ಅಧ್ಯಕ್ಷನ ಕೈಯಲ್ಲಾಗಲಿ ಇರಬಹುದು.

೨. ಶಾಸನ ವಿಧಾಯಕ ಶಾಖೆ ( Legislative) ವ್ಯಕ್ತಿ ಮತ್ತು ಸರಕಾರದ ನಡುವಿನ ವ್ಯವಹಾರವನ್ನು ಸಾಂಗಗೊಳಿಸಲು, ಸಮಾಜ ಮತ್ತು ವ್ಯಕ್ತಿ, ಸಮಾಜ ಮತ್ತು ಸರಕಾರದ ನಡುವಿನ ಸಂಬಂಧವನ್ನು ಸ್ಪಷ್ಟೀಕರಿಸಲು ವಿವಿಧ ಕಾನೂನುಗಳನ್ನು ರಚಿಸುವುದು. ಹಾಗೆಯೆ ಪರಿಸ್ಥಿತಿಗನುಗುಣವಾಗಿ ಕಾನೂನುಗಳನ್ನು ಕಿತ್ತುಹಾಕುವುದು ಅಥವಾ ತಿದ್ದಿಸರಿಪಡಿಸುವುದು. ಕಾರ್ಯಕಾರೀ ಶಾಖೆಯನ್ನು ನಿಯಂತ್ರಿಸುವುದು. ಸಾರ್ವಜನಿಕ ಸಮಸ್ಯೆಗಳ ಮೇಲೆ ತನ್ನ ಅಭಿಪ್ರಾಯ ಮಂಡಿಸಿ ಕಾರ್ಯಕಾರಿ ಸಮಿತಿಗೆ ಪ್ರಶ್ನೆಗಳನ್ನು ಕೇಳುವುದು. ಹಣಕಾಸಿನ ಎಲ್ಲ ಅಧಿಕಾರ ಇದಕ್ಕಿವೆ. ಹಣ ಕೂಡಿಸುವ ಮತ್ತು ವಿನಿಯೋಗಿಸುವ ವಿಧಗಳನ್ನು ಅದೇ ಗೊತ್ತು ಮಾಡುವುದು. ತನ್ನ ವಿಷಯವಾಗಿ ಅಥವಾ ತನ್ನ ಸದಸ್ಯರ ಕುರಿತಾಗಲಿ ಬರುವ ತಕರಾರುಗಳನ್ನು ವಿಚಾರಣೆ ಮಾಡುವುದು. ಇಂತಹ ಒಂದೇ ಮಂಡಲವಿದ್ದರೆ ಏಕಮಂಡಲ ಪದ್ಧತಿಯೆಂದೂ ( Unicameral ) ಎರಡು ಮಂಡಲಗಳಿದ್ದರೆ ದ್ವಿಮಂಡಲ ಪದ್ಧತಿಯೆಂದೂ ( Bicameral ) ಕರೆಯುವರು. ( ಪ್ರಶ್ನೆ ೪೪ ನೋಡಿ )

ನ್ಯಾಯವಾಹಕ ಶಾಖೆ ( Judiciary ) ವ್ಯಾಜ್ಯಗಳನ್ನು ತೀರಿಸುವ ಹಾಗೂ ರಚಿತವಾದ ಕಾನೂನುಗಳ ಅರ್ಥವನ್ನು ವಿವರಿಸುವ ಮತ್ತು ಅವುಗಳಂತೆ ಜನರಿಗೆ ನ್ಯಾಯವನ್ನು ತೀರ್ಮಾನಿಸಿ ತೀರ್ಪು ಕೊಡುವ; ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸುವ ಅಧಿಕಾರವು ಇದಕ್ಕಿದೆ ಇದರಿಂದ ನಿರಪರಾಧಿಗಳಿಗೆ ಸಹಾಯವಾಗುವುದು. ದೇಶದಲ್ಲಿ ಏನೇ ಅಪರಾಧಗಳೂ, ಅನ್ಯಾಯಗಳೂ ಆಗದಂತೆ ಕಾನೂನು ರಚಿಸುತ್ತದೆ. ಮೈನರರ ( ಅಲ್ಪ ವಯಸ್ಕ ) ಹಕ್ಕುಗಳ ರಕ್ಷಣೆಗೆ ರಕ್ಷಕರನ್ನು ನಿಯಮಿಸುತ್ತದೆ. ನ್ಯಾಯಾಧೀಶರೆಂಬವರಿಂದ ನ್ಯಾಯ ತೀರ್ಮಾನ ಕೆಲಸವಾಗುತ್ತದೆ. ಹಾಗೂ ಎಲ್ಲರಿಗೂ ನಿಷ್ಪಕ್ಷಪಾತದಿಂದ ನ್ಯಾಯದೊರೆಯುತ್ತದೆ. ನ್ಯಾಯಾಧೀಶರಿಗೆ ಜ್ಯೂರ ಮತ್ತು ಅಸೆಸರ ಸಹಾಯವು ದೊರಕುತ್ತದೆ.

44. Write notes on 1) Bicameral system of Legislature 2) Minorities 3) Separation of powers. 4) Juror & Assessor ಟಿಪ್ಪಣಿ ಬರೆಯಿರಿ.

೧. ದ್ವಿಮಂಡಲ (ಇಮ್ಮನೆ) ಪದ್ಧತಿ:— ಈ ರೀತಿಯಲ್ಲಿ ಕಾಯಿದೆ ವಿಧಾಯಕ ಮಂಡಲಕ್ಕೆ ಮೇಲ್ಮನೆ ಮತ್ತು ಕೆಳಮನೆಗಳೆಂಬ ಎರಡು ಮಂಡಲಗಳಿವೆ.

ಮೇಲ್ಮನೆಯಲ್ಲಿ ದೇಶದೇಳಿಗೆಗೆ ವಿರೋಧಕವಾಗಿರುವ ಸದಸ್ಯರೇ ಹೆಚ್ಚಿರುವರು. ಅಲ್ಲದೆ ಇಮ್ಮನೆಗಳಲ್ಲೂ ಆಗಾಗ ಮತ ಭೇದವಾಗಿ ತಿಕ್ಕಾಟ ವಾಗುವುದಿದ್ದು ದೇಶದ ಏಳಿಗೆಗೆ ತಡೆಯಾಗುವುದು. ಕೆಳಮನೆಯ ಅವಸರದ ಘಟನೆಗಳಿಗೆ ಮೇಲ್ಮನೆ ಸಮ್ಮತಿ ಕೊಡಲಿಕ್ಕಿಲ್ಲ. ಚುನಾವಣೆಗಳಲ್ಲಿ ಆರಿಸಲ್ಪಡದ ಹುರಿಯಾಳುಗಳ ಯೋಗ್ಯತೆ ನೋಡಿ ಮೇಲ್ಮನೆ ತನ್ನಲ್ಲಿ ನೇಮಿಸಿಕೊಳ್ಳುವುದು. ಇದರಲ್ಲಿ ಬಂಡವಲಶಾಹಿ ಹಾಗೂ ವ್ಯಾಪಾರಿ ವರ್ಗದವರಿಗೆ ಪ್ರಾತಿನಿಧ್ಯ ದೊರೆಯಬಹುದು. ಈ ಇಮ್ಮನೆಯ ಪದ್ಧತಿಯಿಂದ ಸರಕಾರದ ಕೆಲಸಗಳು ವಿಳಂಭ ರೂಪ ತಳೆವವು. ಮತ್ತು ಹಣದ ವೆಚ್ಚ ವಾಗುವದು. ಎಲ್ಲ ವಿಷಯಗಳಲ್ಲೂ ಎರಡೂ ಮನೆಗಳ ಅಭಿಪ್ರಾಯ ಒಂದೇ ಇದ್ದರೆ ಮೇಲ್ಮನೆಯನ್ನು ವಿಸರ್ಜಿಸಬಹುದು. ಸಂಯುಕ್ತ ಸರಕಾರ ಪದ್ಧತಿಗೆ ಮಾತ್ರ ಇಮ್ಮನೆಯ ಪದ್ಧತಿ ಉಚಿತವಾಗಿದೆ.

೨. ಅಲ್ಪ ಸಂಖ್ಯಾಕರು:— ಒಟ್ಟು ಜನಸಂಖ್ಯೆಯ ಕೆಲ ಅಂಶದಲ್ಲಿ ಜಾತೀಯ ಅಥವಾ ರಾಜಕೀಯ ಒಮ್ಮತಹೊಂದಿರುವ ಜನರಿಗೆ ಅಲ್ಪ ಸಂಖ್ಯಾಕರೆನ್ನುವದು. ಈ ಅಲ್ಪ ಸಂಖ್ಯಾಕರಿಗೆ ಸ್ವತಂತ್ರ ಮತದಾರ ಸಂಘಗಳನ್ನು ಸ್ಥಾಪಿಸುವದರಿಂದ ಅವರವರ ಜಾತಿ—ಪಕ್ಷಗಳ ಹಿತ ಸಾಧಿಸುವುದೆಂದು ತಿಳಿದು ಅವರಿಗೆ ಕೆಲ ಸ್ಥಾನಗಳನ್ನು ಮೀಸಲಿಟ್ಟಿದ್ದರು. ಇದರಿಂದ ಅವರು ಇನ್ನೂ ಅಲ್ಪ ಸಂಖ್ಯಾಕರಾಗಿಯೆ ಉಳಿಯುವರು. ಇದರಿಂದ ಚುನಾವಣೆ ಕಾಲದಲ್ಲಿ ಬಹಳ ಕಷ್ಟ—ಅಡಚಣೆಗಳಾಗುವವು. ಜಾತಿ ಮತ್ತು ಪಕ್ಷ ದ್ವೇಷಗಳು ಹೆಚ್ಚಾಗುವವು. ಒಟ್ಟಾರೆ ಈ ಅಲ್ಪ ಸಂಖ್ಯಾಕರ ಸಮಸ್ಯೆ ರಾಷ್ಟ್ರ ಹಿತಕ್ಕೆ ಧಕ್ಕೆಯಾಗಿದೆ. ಆದ್ದರಿಂದ ಅಲ್ಪ ಸಂಖ್ಯಾಕರು ಸ್ವತಂತ್ರ ಮತದಾರ ಸಂಘ ಮತ್ತು ಪ್ರಾತಿನಿಧ್ಯಗಳನ್ನು ಬಯಸದೆ ಬಹು ಸಂಖ್ಯಾಕರ ಜೊತೆಗೆ ಬೆರೆಯಬೇಕು. ಹಾಗೂ ಮಿಶ್ರಿತ ಮತದಾರ ಸಂಘಗಳನ್ನು ಸ್ಥಾಪಿಸಬೇಕು.

**೩. ಅಧಿಕಾರ ವಿಚ್ಛೇದನೆ:–** ಕಾರ್ಯಕಾರಿ ಕಾಯ್ದೆ ವಿಧಾಯಕ ಹಾಗೂ ನ್ಯಾಯವಾಹಕ ಅಧಿಕಾರಗಳನ್ನು ಒಬ್ಬನ ಕೈಯಲ್ಲೆ ಕೊಡುವುದರಿಂದ ವ್ಯಕ್ತಿ ಮತ್ತು ಅಧಿಕಾರಿಗಳ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದೆಂದು ಆಧುನಿಕ ಸರಕಾರವು ಎಲ್ಲ ಅಧಿಕಾರಗಳನ್ನು ಬೇರೆ ಬೇರೆಯಾಗಿ ವಿಂಗಡಿಸಿದೆ. ಇದರಿಂದ ವಿಶಿಷ್ಟ ಅಧಿಕಾರಿಗಳು ವಿಶಿಷ್ಟ ಅಧಿಕಾರಗಳ ಮೇಲ್ವಿಚಾರಣೆಯನ್ನು ಮಾಡಿ ವ್ಯವಹಾರದಲ್ಲಿ ಒಂದು ಶಿಸ್ತು ಇದುತ್ತದೆ. (ಅಧಿಕಾರಗಳನ್ನು ತೀರಾ ಬೇರೆಯಾಗಿ ವಿಂಗಡಿಸಲು ಅಸಾಧ್ಯ. ಅವು ಎಷ್ಟೆಂದರೂ ಒಂದೆ ಮರದ ಬೇರುಗಳು.)

**೪. ನ್ಯಾಯಾಲಯ ಪಂಚಾಯಿತರು:–** ಇವರು ವ್ಯವಹಾರ, ಕಾಯ್ದೆ. ಸಾಮಾಜಿಕ ವಿಷಯಗಳ ತಜ್ಞರಿದ್ದು ಫೌಜದಾರಿ ವ್ಯಾಜ್ಯಗಳನ್ನು ನಡೆಸುವಾಗ ನ್ಯಾಯಾಧೀಶರಿಗೆ ಸಹಾಯ ಮಾಡುವರು. ಎಲ್ಲ ತೀರ್ಪು ಕೇಳಿದ ಮೇಲೆ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾರೆ. ಇವರಲ್ಲಿ ಜ್ಯೂರರ ಮತ್ತು ಅಸೆಸರ ಎಂಬ ಪ್ರಭೇದವಿರುತ್ತದೆ. ಅಸೆಸರ ನಿರ್ಣಯವು ನ್ಯಾಯಾಧೀಶನಿಗೆ ಪ್ರತಿಬಂಧಕ ವಿರದಿದ್ದರೂ ಜ್ಯೂರರ ನಿರ್ಣಯಕ್ಕೆ ನ್ಯಾಯಾಧೀಶನು ತಲೆವಾಗಲೇ ಬೇಕು. ನ್ಯಾಯಾಧೀಶ ಮತ್ತು ಜೂರರ ನಡುವೆ ಮತ ಭೇದವಾಗಿ ವಿಚಾರಣೆಗೆ ಕಷ್ಟವಾದರೆ ಮೇಲ್‌ಕೋರ್ಟಿಗೆ ವ್ಯಾಜ್ಯವನ್ನು ಹಾಜರ ಮಾಡುತ್ತಾರೆ. ಸಾಮಾನ್ಯವಾಗಿ ಇವರ ಸಂಖ್ಯೆ ೫ ಇರುತ್ತದೆ. ಇವರ ನಿರ್ಣಯದಿಂದ ವಾದಿಗಳ ಮನಸ್ಸಿಗೆ ಸಮಾಧಾನವಾಗುವುದು. ಇವರಿಗೆ ವಿಶಿಷ್ಟ ವೇತನವಿಲ್ಲ. ಸಮಾಜದಲ್ಲಿ ಮರ್ಯಾದಿತರಾಗಿರುತ್ತಾರೆ.

## ★ ಎರಡನೆ ವಿಭಾಗ

## ★ ರಾಜ್ಯ ಕಾರಭಾರ.

45. Write short notes on :- 1) Morley minto's Reforms. 2) Montford Reforms. 3) Act of 1935 **ಟಿಪ್ಪಣಿ** ಬರೆಯಿರಿ.

**೧. ಮೊರ್ಲೆ ಮಿಂಟೊ ಸುಧಾರಣೆ:-** ಆಧುನಿಕ ಶಿಕ್ಷಣ, ರಾಷ್ಟ್ರೀಯ ಪ್ರೇಮ, ಸ್ವಾತಂತ್ರ್ಯ ಪ್ರೇಮಗಳ ಪರಿಣಾಮದಿಂದ ಜನತೆ ಎಚ್ಚೆತ್ತು ಸ್ವರಾಜ್ಯ ಸ್ಥಾಪನೆಗೆ ಯತ್ನ ನಡಿಸಿದರು. ೧೮೮೫ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸ್ಥಾಪನೆಯಾಯಿತು. ಪಾರ್ಲಿಮೆಂಟು ಜನರ ಸಮಸ್ಯೆಗಳನ್ನು ಪರಾಂಭರಿಸಲು ಮೊರ್ಲೆ ಮಿಂಟೊ ಸುಧಾರಣೆ ಪಾಸುಮಾಡಿತು. ಇದರಿಂದ ಅಪ್ರತ್ಯಕ್ಷ ಚುನಾವಣೆ ಜಾರಿಗೆ ಬಂದು ಕೇಂದ್ರ ಹಾಗೂ ಪ್ರಾಂತಿಕ ಶಾಸನ ಸಭೆಗಳ ವಿಸ್ತಾರವಾಯಿತು. ಸದಸ್ಯರಿಗೆ ಹಣದ ಅಧಿಕಾರ ಬಿಟ್ಟು ಕೆಲ ಹೆಚ್ಚಿನ ಅಧಿಕಾರ ದೊರೆಯಿತು. ವಿವಿಧ ಪಕ್ಷ ಪಂಗಡಗಳಿಗೆ ಸ್ಥಾನ ಕಾಯ್ದಿಡುವದಾಯಿತು. ಜನರಿಗೆ ಈ ಸುಧಾರಣೆಯಿಂದ ಅತೀವ ಅತೃಪ್ತಿಯಾಯಿತು.

**೨. ಮೊಂಟೆ ಫರ್ಡ ಸುಧಾರಣೆ:-** ಭಾರತೀಯರ ಅಸಹಕಾರ ಬೇಡಿಕೆಗಳ ಕುರಿತು ವಿಚಾರ ಮಾಡಲು "ಮಿಸ್ಟರ್ ಮೊಂಟೆಗೊ" ಎಂಬವರು ಭಾರತಕ್ಕೆ ಬಂದರು. (ಅವರು ಆಗ ಭಾರತ ಮಂತ್ರಿಯಾಗಿದ್ದರು.) ದೇಶದಲ್ಲೆಲ್ಲ ತಿರುಗಾಡಿ ವಿವಿಧ ಜನರ ವಿವಿಧ ಭಾವನೆ, ಸೂಚನೆಗಳನ್ನು ಸಂಗ್ರಹಿಸಿ ತಿರುಗಿ ಹೋಗಿ ಪಾರ್ಲಮೆಂಟಿಗೆ ಒಪ್ಪಿಸಿದರು. ೧೯೧೯ರಲ್ಲಿ ಪಾರ್ಲಮೆಂಟು ಅದನ್ನು ಜಾರಿಗೆ ತಂದಿತು. ಇದರಿಂದ ಪ್ರಾಂತಿಕ ದ್ವಿದಳ ಪದ್ಧತಿ ಬಳಕೆಗೆ ಬಂದಿತು. ಶಾಸನ ಸಭೆಯ ಸದಸ್ಯರ ಮತಾಧಿಕ್ಯವಾಗಿ ಅನೇಕ ಅಧಿಕಾರಗಳವರಿಗೆ ದೊರೆತವು. ೬ ಜನ ಹಿಂದೀಯರಿಗೆ ಕಾರ್ಯ

ಕಾರೀ ಶಾಖೆಯಲ್ಲಿ ಸ್ಥಳಕೊಟ್ಟರು. ಶಾಸನ ಮಂಡಲವು ವಿಶಾಲವಾಯಿತು ಹಾಗೂ ಆದಕ್ಕೆ ಮುಂಗಡ ಪತ್ರದ ಕುರಿತು ಮತ ಕೊಡುವ ಅಧಿಕಾರ ದೊರೆಯಿತು. ಆದರೆ ಕೇಂದ್ರಾಧಿಕಾರದಲ್ಲಿ ಜನರಿಗೆ ಹಕ್ಕು ದೊರೆಯದ್ದ ರಿಂದ ಅಸಹಕಾರ ಚಳವಳಿಗೆ ಆರಂಭವಾಯಿತು.

೩. ೧೯೩೫ರ ಕಾಯ್ದೆ :– ಈ ಕಾಯ್ದೆಗೆ ಇತಿಹಾಸದಲ್ಲಿ ಬಹು ಮಹತ್ವವಿದ್ದರೂ ದೇಶದ ಕೆಲ ಭಾಗಗಳಲ್ಲಿ ಮಾತ್ರ ಕೇವಲ ೧೨ ವರ್ಷ ಗಳಲ್ಲಿ ಉಳಿಯಿತು ಗವ್ಹರ್ನರ ಹಾಗೂ ಚೀಫ್ ಕಮಿಶನರ ಪ್ರಾಂತಗಳು ಮತ್ತು ಆಳರಸರ ಸಂಸ್ಥಾನಗಳೂ ಕಾರಭಾರದ ಸರಳತೆಗಾಗಿ ಕೇಂದ್ರೀಕೃತ ವಾಗಬೇಕೆಂಬ ಅಭಿಪ್ರಾಯವಿತ್ತು ಪ್ರಾಂತಿಕ ಸ್ವಾಯುತ್ತತೆ ಜಾರಿಗೆ ಬಂದಿತು. ಗವ್ಹರ್ನರ ಜನರಲನಿಗೆ ಇನ್ನೂ ಹೆಚ್ಚಿನ ಕೆಲ ಅಧಿಕಾರಗಳು ದೊರೆತವು. ೧೯೩೭ರಲ್ಲಿ ಅದರ ಮೇರೆಗೆ ಪ್ರಾಂತಿಕ ಶಾಸನ ಸಭಾ ಚುನಾ ವಣೆ ನಡೆಯಿತು,

## 46. What is Provincial autonomy ? ಪ್ರಾಂತಿಕ ಸ್ವಾಯತ್ತತೆ ಎಂದರೇನು ?

೧೯೩೫ರ ಕಾಯ್ದೆಯಂತೆ ಈ ಪದ್ಧತಿ ಜಾರಿಗೆ ಬಂದಿತು. ಇದರಿಂದ ಗವ್ಹರ್ನರ ಜನರಲ ಹಾಗೂ ಗವ್ಹರ್ನರ ಅಧಿಕಾರವನ್ನು ನೇರವಾಗಿ ಚಕ್ರ ವರ್ತಿಯಿಂದಲೆ ಪಡೆಯಬೇಕು. ಮತ್ತು ಅವರೇ ತಮ್ಮ ಸಹಾಯಕ ಮಂಡಳಿ ಗಳ ಅಧಿಕಾರಿಗಳನ್ನಾರಿಸಿಕೊಳ್ಳಬೇಕು. ಇಡೀ ಪ್ರಾಂತದ ಎಲ್ಲ ಖಾತೆಯ ವ್ಯವಹಾರಗಳೂ ಲೋಕನಿಯುಕ್ತ ಶಾಖೆಯ ಸಭಾಸದ ಮಂತ್ರಿಗಳಿಗೆ ಕೊಡಲಾಯಿತು. ಅವರೇ ತಮ್ಮ ಮತದಂತೆ ಅನುಕೂಲವಾಗಿ ತಮ್ಮ ಕೆಲಸಗಳನ್ನು ಸಾಗಿಸಬೇಕು. ಹಾಗೂ ತಮ್ಮ ಕರ್ತವ್ಯದಿಸೆಯಲ್ಲಿ ತಮಗೆ ಬೇಕಾದ ಸುಧಾರಣೆಗಳನ್ನು ಮಾಡಬಹುದು. ಆದರೆ ಅವರಿಗೆ I. C. S. ಹಾಗೂ ಪೋಲೀಸ್ ಅಧಿಕಾರದ ಮೇಲೆ ಮತ್ತು ಹಣಕಾಸಿನ ಕುರಿತು ವಿಶಿಷ್ಟ ಅಧಿಕಾರಗಳಿರಲಿಲ್ಲ. ಗವ್ಹರ್ನರು ವೈಯುಕ್ತಿಕವಾಗಿ ವರ್ತಿಸಬಹುದು. ಆಜ್ಞೆಗಳನ್ನು ಹೊರಡಿಸಬಹುದು. ಮಂತ್ರಿಮಂಡಳಕ್ಕೆ ಅಧ್ಯಕ್ಷನಾಗ ಬಹುದು, ಹೀಗೆಲ್ಲ ಈ ಘಟನೆಯಿಂದ ಕೇಂದ್ರದ ನಿಯಂತ್ರಣವಿಲ್ಲದ್ದರಿಂದ

ಎಲ್ಲ ಪ್ರಾಂತಗಳೂ ತಮ್ಮ ಮತದಂತೆ ಹಾಗೂ ಪರಿಸ್ಥಿತಿಗನುಗುಣವಾಗಿ ನಡೆಯುವ ಹಕ್ಕು ಪಡೆದವು. ಆದರೆ ಎಲ್ಲ ಅಧಿಕಾರ ಬ್ರಿಟಿಶ್ ಪಾರ್ಲಿಮೆಂಟಿನಿಂದಲೇ ನೇರವಾಗಿ ಪಡೆಯಬೇಕಾಗಿತ್ತು.

47. Write five sentences on :– 1) Diarchy in provinces. 2) Instrument of accession. ಐದೈದು ವಾಕ್ಯ ಬರೆಯಿರಿ.

೧. ಪ್ರಾಂತಿಕ ದ್ವಿದಲ ಪದ್ಧತಿ:– ಇದೊಂದು ವಿಧದ ರಾಜ್ಯ ಪದ್ಧತಿ. ೧೯೧೯ರ ಕಾಯ್ದೆಯಂತೆ ಪ್ರಾಂತಗಳಲ್ಲಿ ಜಾರಿಗೆ ಬಂದಿತ್ತು. ಇದರಲ್ಲಿ ಕಾರ್ಯಕಾರಿ ಶಾಖೆಯು ಇಭಾಗವಾಗಿ ಮಂತ್ರಿ ಮಂಡಲವು ಶಾಸನ ಸಭೆಗೆ ಅಧೀನವಾಗಿಯೂ ಗವ್ಹರ್ನರ ಮೊದಲಾದವರು ಅದಕ್ಕೆ ಅಧೀನರಿಲ್ಲದೆಯೂ ಕೆಲಸ ಮಾಡುವುದು. ಇದು ಜಾರಿಯಲ್ಲಿ ಬಂದರೂ ಮಂತ್ರಿ ಮಂಡಲ, ಸಭಾಸದರೊಳಗೆ ಮತ್ಸರ–ಅಸೂಯೆಗಳುಂಟಾಗಿ ಕಾರ್ಯದಕ್ಷತೆಯಿಲ್ಲದೆ ದ್ವಿದಲ ಪದ್ಧತಿ ಯಶಸ್ವಿಯಾಗಿ ಕರ್ತವ್ಯ ಪಾಲಿಸಲಿಲ್ಲ.

೨. ಸ್ವೀಕಾರ ಪತ್ರ:– ಸಂಯುಕ್ತ ರಾಜ್ಯ ಪದ್ಧತಿಯಲ್ಲಿ ಸಂಸ್ಥಾನಿಕರು ತಮ್ಮ ವಿಶಿಷ್ಟ ಅಧಿಕಾರಗಳನ್ನು ಸಂಯುಕ್ತ ರಾಜ್ಯ ಮಂಡಳಕ್ಕೆ ಈ 'ಸ್ವಿಕಾರ' ಪತ್ರದ ಮೂಲಕ ಒಪ್ಪಿಗೆ ಕರಾರಿನಿಂದ ಬಿಟ್ಟುಕೊಡುತ್ತಾರೆ. ಆ ಸ್ವೀಕಾರ ಪತ್ರದಲ್ಲಿ ಪ್ರಾಂತಗಳ, ಸಂಸ್ಥಾನಗಳ ಹಾಗೂ ಸಂಯುಕ್ತ ಮಂಡಳಗಳೊಳಗಿನ ವ್ಯವಹಾರ ನೀತಿ–ಕರಾರುಗಳ ಉಲ್ಲೇಖವಿರುತ್ತೆ. ಈ ರುಜುವಾತಾದ ಮೇಲೆ ಪರಿಸ್ಥಿತಿ ಬದಲಾಗದು.

48. 1) What is federation? 2) What are its main features? 3) What are its merits and drawbacks?

೧. ಸಂಯುಕ್ತ ರಾಜ್ಯಘಟನೆ ಎಂದರೇನು? ಸ್ವತಂತ್ರ ರಾಜಕೀಯ ಘಟಕಗಳೆಲ್ಲ ಒಂದು ವಿಶಿಷ್ಟ ಸಮಸ್ಯೆಯ ಸಾಧನೆಗಾಗಿ ಇಲ್ಲವೆ ಕರ್ತವ್ಯ ಪಾಲನೆಗಾಗಿ ಕೇಂದ್ರೀಕೃತವಾಗಿ ಒಂದುಗೂಡುತ್ತವೆ. ಮತ್ತು

ತಮ್ಮೆಲ್ಲರ ಪರವಾಗಿ ಏಕಧೋರಣೆಯಿಂದ ವ್ಯವಹಾರ ಸಾಗಿಸಲು ಕೇಂದ್ರದ ಅಧಿಕಾರವಹಿಸಲು ತಾವೇ ಒಂದು ಸಮಿತಿಯನ್ನು ರಚಿಸಿ ಅದಕ್ಕೆ ಕಾರ್ಯಾಧಿಕಾರ ಕೊಡುವವು. ಅಖಿಲ ಭಾರತ ಸಂಯುಕ್ತ ರಾಜ್ಯ ಪದ್ಧತಿಯಲ್ಲಿ ( All India Federation ) ಪ್ರಾಂತಗಳೂ ಸಂಸ್ಥಾನಗಳೂ ಒಂದೆಡೆ ಕೂಡಿಕೊಳ್ಳುತ್ತವೆ. ಆದರೆ ಈ ಪದ್ಧತಿ ಜಾರಿಯಲ್ಲಿ ಉಳಿಯಲಿಲ್ಲ. ರಾಜಕೀಯ ಘಟಕಗಳ ಬಿಕ್ಕಟ್ಟೆ ಇದಕ್ಕೆ ಕಾರಣ.

**೨. ಅದರ ಮುಖ್ಯ ಲಕ್ಷಣಗಳೇನು?** ಅದರ ಘಟನೆಯನ್ನು ಸರಳವಾಗಿ ಯಾರಿಂದಲೂ ಬದಲು ಮಾಡಲು ಬಾರದಂತಿರಬೇಕು. ರಾಜಕೀಯ ಘಟಕಗಳಲ್ಲಿ ( ಪ್ರಾಂತ, ಸಂಸ್ಥಾನಗಳಲ್ಲಿ ) ಮೊದಲಿಗೇ ನಿಶ್ಚಿತ ಅಧಿಕಾರ—ಹಕ್ಕುಗಳ ವಿತರಣೆ ಇರಬೇಕು. ಘಟನೆಯ ಅರ್ಥವನ್ನು ವಿವರಿಸಲು ಮತ್ತು ಸ್ಪಷ್ಟಪಡಿಸಲು ಒಂದು ಸಂಯುಕ್ತ ಮಂಡಳ ನ್ಯಾಯಾಲಯವಿರಲೇಬೇಕು. ಎಲ್ಲ ಘಟಕಗಳ ಮೇಲೂ ಏಕಾಧಿಕಾರಹೇರಬೇಕು.

**೩. ಗುಣದೋಷಗಳೇನು?** ಇದಕ್ಕೆ ಸೇರಿಕೊಳ್ಳುವುದು ಬಹು ಸುಲಭವಾದರೂ ಹೊರಬೀಳಲಿಕ್ಕೆ ಬಹು ಪ್ರಯಾಸ. ಸಂಯುಕ್ತ ಮಂಡಲವು ಎಲ್ಲ ಘಟಕಗಳ ಮೇಲೂ ಏಕಾಧಿಕಾರ ಹೇರುವುದಿಲ್ಲ. ಏಕೆಂದರೆ ಆಯಾ ಘಟಕಾಧಿಕಾರಿಗಳು ಕೊಡುವ ಸ್ವೀಕಾರ ಪತ್ರಗಳು ಒಂದೇ ತೆರನಿರುವುದೆಂದು ಹೇಳಲಾಗದು ಮತ್ತು ಆ ಸ್ವೀಕಾರ ಪತ್ರದಂತೆ ನಡೆಯಬೇಕಾಗಿದೆ. ಘಟನೆಯನ್ನು ಸರಿಪಡಿಸುವ ಹಕ್ಕು ಘಟಕಗಳಿಗೆ ಇರಲಾರದು. ಮತ್ತು ಅವು ಕೇಂದ್ರವು ವಿಂಗಡಿಸುವ ಹಕ್ಕುಗಳನ್ನಷ್ಟೆ ಪಡೆಯಬೇಕಾಗಿತ್ತು. ಆದರೆ ಈ ಪದ್ಧತಿಯಿಂದ ಏಕ ರಾಷ್ಟ್ರೀಯ ಭಾವನೆ ಬೆಳೆಯಲು ಸಾಧ್ಯವಿತ್ತು. ಅದಕ್ಕೆ ತಕ್ಕುದಾದ ಎಲ್ಲ ಲಕ್ಷಣಗಳು ಇರದಿದ್ದರೆ ಅದು ಯಶವನ್ನು ಗಳಿಸುವುದೆಂತು? ಭಾರತದಲ್ಲೂ ಕಾರಣಾಂತರಗಳಿಂದಾಗಿ ಅದು ಜಾರಿಗೆ ಬರಲಿಲ್ಲ.

**49. Explain "Indian Independence Act of 1947". ೧೯೪೭ರ ಭಾರತೀಯ ಸ್ವಾತಂತ್ರ್ಯ ಕಾಯ್ದೆಯನ್ನು ವಿವರಿಸಿರಿ.**

೧೯೪೭ ನೇ ಜುಲೈ ೧೮ ರಂದು ಇದು ಬ್ರಿಟಿಶ್ ಪಾರ್ಲಮೆಂಟಿನಿಂದ ಪಾಸಾಗಿ ಬಂದಿತು. ಇದರಂತೆ ಅಖಂಡ ಹಿಂದುಸ್ಥಾನವು " ಹಿಂದುಸ್ಥಾನ–ಪಾಕಿಸ್ಥಾನ " ಗಳೆಂಬ ಎರಡು ಸಾಮಂತ ಸರಕಾರಗಳಾಗಿ ಇಬ್ಭಾಗವಾಯಿತು. ಹಿಂದುಸ್ಥಾನಕ್ಕೆ ಚೀಫ್ ಕಮಿಶನರ ಹಾಗೂ ಗವ್ಹರ್ನರ ಪ್ರಾಂತೆಗಳು ಸೇರಿದವು. ಪಾಕಿಸ್ಥಾನಕ್ಕೆ ಪಶ್ಚಿಮ ಪಂಜಾಬ, ಸಿಂಧದ ಭಾಗ, ಪೂರ್ವ ಬಂಗಾಲ, ಬಲೂಚಿಸ್ಥಾನದ ಬ್ರಿಟಿಶ್ ಭಾಗ, ವಾಯುವ್ಯ ಸರಹದ್ದಿನ ಪ್ರಾಂತೆಗಳೆಲ್ಲ ಸೇರಿದವು. ಇಂಗ್ಲಂಡದಲ್ಲಿ ಆವರೆಗೆ ಇದ್ದ ಭಾರತ ಮಂತ್ರಿ ಶಾಖೆಯು ಮುಚ್ಚಲ್ಪಟ್ಟು ಅವನ ಸಹಕಾರೀ ಅಧಿಕಾರಿಗಳೆಲ್ಲ ಸಾಮಂತ ಸರಕಾರದ ನೌಕರರಾದರು. ಎರಡೂ ಪ್ರದೇಶಕ್ಕೆ ಪ್ರತ್ಯೇಕ ಗವ್ಹರ್ನರ ಜನರಲ್ಲರ ನೇಮಕವಾಯ್ತು. ಮತ್ತು ಚಕ್ರವರ್ತಿಯಂತೆ ಅವನು ಅಧಿಕಾರ ಸಾಗಿಸ ಬಹುದಾಯ್ತು. ಗುಡ್ಡಗಾಡು ಪ್ರದೇಶ ಮತ್ತು ಸಂಸ್ಥಾನಗಳ ನಡುವೆ ಚಕ್ರವರ್ತಿಗೆ ಯಾವ ಅಧಿಕಾರವಿರಲಿಲ್ಲ. ಅವನು ಅವುಗಳೊಡನೆ ಹಿಂದೆ ಮಾಡಿಕೊಂಡಿರಬಹುದಾದ ಯಾವುದೇ ಒಪ್ಪಂದ ಕರಾರುಗಳು ರದ್ದಾದವು ಎರಡೂ ಪ್ರದೇಶಗಳಿಗೆ ಸ್ವತಃ ಕಾಯ್ದೆ ರಚಿಸುವ ಮತ್ತು ರದ್ದುಗೊಳಿಸುವ ಅಧಿಕಾರ ದೊರೆಯಿತು. ಮತ್ತು ಸೈನ್ಯದ ವಿಭಜನೆಯಾಯ್ತು. ಎರಡು ಘಟನಾ ಸಮಿತಿಗಳು ಅಸ್ತಿತ್ವದಲ್ಲಿ ಬಂದು ನೂತನ ರಾಜ್ಯಘಟನೆ ಜಾರಿಗೆ ಬರುವ ತನಕ ಅದೇ ಸಮಿತಿ ಶಾಸನ ಮಂಡಳದ ಕೆಲಸ ಮಾಡಬೇಕಾಯ್ತು. ಈ ಸಮಿತಿಯಲ್ಲದೆ ಗಡಿ ನಿರ್ಣಯಕ್ಕೆ, ಅಧಿಕಾರವಿತರಣೆಗೆ, ಸಂಪತ್ತಿನ ವಿಭಾಗಕ್ಕೆ ಮೊದಲಾಗಿ ಉಪಸಮಿತಿಗಳೂ ರಚಿತವಾದವು. ಅಂತೂ ಭಾರತೀಯರಿಗೆ ಸ್ವಾತಂತ್ರ್ಯ ಕಹಳೆ ಊದಿದ ಕಾಯ್ದೆ ಇದೆನ್ನಬಹುದು.

## 50. Write a short note on : The constituent Assembly of India. ಟಿಪ್ಪಣಿ ಬರೆಯಿರಿ.

**ಭಾರತದ ಘಟನಾ ಸಮಿತಿ :**— ೧೯೪೭ರ ಕಾಯ್ದೆಯಂತೆ ಉಂಟಾದ ಪಾಕಿಸ್ಥಾನ, ಹಿಂದುಸ್ಥಾನ ವಿಭಾಗಗಳಿಂದ ಎರಡೂ ಸಾಮಂತ ಸರಕಾರಗಳಿಗೆ ಬೇರೆ ಬೇರೆ ಘಟನಾ ಸಮಿತಿಗಳಾದವು. ಭಾರತಕ್ಕೆ ಮೊದಲಿದ್ದ ಘಟನಾ ಸಮಿತಿಯೇ ಕೆಲಸ ಮಾಡುವುದೆಂದೂ ಪಾಕಿಸ್ಥಾನಕ್ಕೆ ಹೊಸ ಸಮಿತಿಯ ರಚನೆಯೂ ಆದವು. ಅಲ್ಲದೆ ಹೊಸ ರಾಜ್ಯ ಘಟನೆ ಜಾರಿಗೆ

ಬರುವವರೆಗೆ ಅವೇ ಶಾಸನ ಮಂಡಳಗಳ ಕೆಲಸ ಮಾಡಬೇಕಾಯಿತು. ಭಾರತದಲ್ಲಿ ಘಟನಾ ಸಮಿತಿಯು ಡಾ|| ಭೀಮರಾವ್ ಅಂಬೇಡಕರರವರ ನೇತೃತ್ವದಲ್ಲಿ ೬ ಸದಸ್ಯರ ಕರಡು ಸಮಿತಿಯನ್ನು ನೇಮಿಸಿ ಭಾರತದ ಘಟನೆಯ ಬಗ್ಗೆ ಕರಡನ್ನು ತಯಾರಿಸಬೇಕೆಂದು ಹೇಳಿತು. ಹಾಗೆಯೆ ಅನೇಕ ವಿಧ ಚರ್ಚೆಗಳಿಗಾಗಿ, ೧೧ ಅಧಿವೇಶನಗಳಾಗಿ. ಹಾಗೂ ಸುಮಾರು ೬೪ ಲಕ್ಷ ರೂಪಾಯಿ ವೆಚ್ಚಮಾಡಿ ಬಹು ಪರಿಶ್ರಮದಿಂದ ಕರಡನ್ನು ಕರಡು ಸಮಿತಿಯು ತಯಾರಿಸಿತು. ನಂತರದಲ್ಲಿ ಅದು ೨೬-೧೧-೧೯೪೯ ರಂದು ಘಟನಾ ಸಮಿತಿಯಿಂದ ಸ್ವೀಕರಿಸಲ್ಪಟ್ಟಿತು. ಘಟನಾ ಸಮಿತಿಯೂ ೨೬-೧-೫೦ ರ ವರೆಗೆ ಕೆಲಸ ಮಾಡಿ ಕೊನೆಗೆ ಒಕ್ಕೂಟ ರಾಜ್ಯದ ಸದ್ಯದ ಪಾರ್ಲಿಮೆಂಟಾಗಿ ಮಾರ್ಪಾಟಾಯಿತು.

**A) 51. Trace the development of the central Executive council. ಕೇಂದ್ರಕಾರ್ಯಕಾರಿ ಮಂಡಳದ ಬೆಳವಣಿಗೆ ವಿವರಿಸಿರಿ.**

೧೭೭೩ ರಲ್ಲಿ ರೆಗ್ಯುಲೇಟಿಂಗ ಕಾಯ್ದೆ ಮೇರೆಗೆ ೪ ಸದಸ್ಯರ ಕಾರ್ಯಕಾರಿ ಮಂಡಳವು ಗವ್ಹರ್ನರ ಜನರಲ್ಲನ ಸಹಕಾರಕ್ಕೆಂದು ನೇಮಕ ಹೊಂದಿತು. ಹಾಗೆಯೆ ೧೭೮೪ ರಲ್ಲಿ ಪಿಟ್ಸ್ ಇಂಡಿಯಾ ಕಾಯ್ದೆಯಂತೆ ಈ ಮಂಡಳದ ಒಬ್ಬ ಸದಸ್ಯನನ್ನು ಕಡಿಮೆ ಮಾಡಿದರು. ಆದರೆ ಮಂಡಳವು ಕಾಯ್ದೆಯ ಕೆಲಸವನ್ನು ಸರಿಯಾಗಿ ನಡೆಸದೆ ೧೮೩೩ ರಲ್ಲಿ ಕಾಯ್ದೆ ಸದಸ್ಯನೊಬ್ಬನ ಸೇರ್ಪಡೆಯಾಯಿತು. ಆದರೆ ಅವನನ್ನು ೫೩ ರಲ್ಲಿ ಸಾಮಾನ್ಯ ಸದಸ್ಯ ಪದಕ್ಕೆ ಸೇರಿಸಲಾಯ್ತು. ಬದಲಾಗಿ ೧೮೬೧ ರಲ್ಲಿ ಹಣಕಾಸಿನ ವ್ಯವಹಾರಿ ಸದಸ್ಯನ ಸೇರ್ಪಡೆಯಾಯಿತು. ಮತ್ತು ೧೮೭೪ ರಲ್ಲಿ ಲೋಕೋಪಯೋಗಿ ಸದಸ್ಯನ ಸೇರ್ಪಡೆಯಾಗಿ ೧೯೦೪ ರಲ್ಲಿ ಅವನನ್ನೆ ವ್ಯಾಪಾರ ವ್ಯವಹಾರ ಸದಸ್ಯನೆಂದು ಮಾರ್ಪಡಿಸಿದರು. ೧೯೧೧ ರಲ್ಲಿ ಶಿಕ್ಷಣ ಖಾತೆ ಬಗ್ಗೆ ಒಬ್ಬ ಸದಸ್ಯನಾದನು. ೧೯೧೯ ರಲ್ಲಿ ಮೂವರು ಹಿಂದೀ ಸದಸ್ಯರು ಸೇರಿದರು. ೧೯೪೨ ರಲ್ಲಿ ಮತ್ತೆ ಮೂರು ಜನ ಹೊಸ ಸದಸ್ಯರಾದರು. ೧೯೪೪ ರಲ್ಲಿ ಇನ್ನೊಬ್ಬನ ಸೇರ್ಪಡೆಯಾಗಿ ಕಾರ್ಯಕಾರಿ ಮಂಡಳದಲ್ಲಿ ಒಟ್ಟು ೧೬ ಸದಸ್ಯರಾದರು. ಮುಂದೆ ೧೯೪೬ ರಲ್ಲಿ ಸ್ಥಾಪನೆಯಾದ ಹಂಗಾಮಿ ಸರ

ಕಾರಿನ ಮಂತ್ರಿ ಮಂಡಳಕ್ಕನೇ ಕಾರ್ಯಕಾರೀ ಮಂಡಳದ ಅಧಿಕಾರ ದೊರೆಯಿತು.

B) Trace the development of the Legislature. **ಶಾಸನ ಮಂಡಳದ ಬೆಳವಣಿಗೆ:**

೧೮೩೩ ರ ಕಾಯ್ದೆಯಂತೆ ಕಾರ್ಯಕಾರಿ ಮಂಡಳಕ್ಕೆ ಸೇರ್ಪಡೆಯಾದ ಕಾಯ್ದೆ ಸದಸ್ಯನನ್ನು ಅವಲಂಬಿಸಿಯೇ ಶಾಸನ ಸಭೆಯು ಮೂಲವಾಯಿತು. ಮುಂದೆ ಇಂತಹ ಕಾಯ್ದೆ ಸದಸ್ಯರ ಸಂಖ್ಯೆ ಬೆಳೆಯುತ್ತ ಹೋಯಿತು. ೧೮೬೧ ರಲ್ಲಿ ೧೨ ಜನ ಸದಸ್ಯರಾದರು. ಹೆಚ್ಚಾಗಿ ಹಿಂದೀಯರೂ ಸೇರಿದ್ದರು. ೧೯೧೯ ರಲ್ಲಿ ೬೦ ಸದಸ್ಯರಾಗಿ ಮಂಡಳವು ಬಹಳ ವಿಸ್ತೃತವಾಯಿತು. ಕೇಂದ್ರದಲ್ಲಿ ಮೇಲ್ಮನೆ ಮತ್ತು ಕೆಳಮನೆಗಳೆಂಬ ಎರಡು ಕವಲುಗಳು ಹುಟ್ಟಿ ೧೯೩೫ ರಲ್ಲಿ ಕೆಳಮನೆ ಸದಸ್ಯರನ್ನು ಏರಿಸುವದಾಯಿತು. ಮುಂದೆ ನೂತನ ರಾಜ್ಯ ಘಟನೆಯಂತೆ ಮೇಲ್ಮನೆಗೆ ೨೫೦ ಹಾಗೂ ಕೆಳಮನೆಗೆ ೫೦೦ ಸದಸ್ಯರು ಇರಬಹುದೆಂದಾಯ್ತು. ಹೀಗೆ ಕಾರ್ಯಕಾರಿ ಮಂಡಳದಿಂದ ಸಂಪೂರ್ಣ ಬೇರೆಯಾಗಿ ಅದಕ್ಕಿಂತಲೂ ವಿಸ್ತಾರವಾಗಿ ಕೆಲಸ ಮಾಡುವುದು ಶಾಸನ ಮಂಡಳ.

52. Give a short account of the District Administration in India: **ಭಾರತದ ಜಿಲ್ಲಾಡಳಿತೆಯ ಕುರಿತು ಚಿಕ್ಕ ವಿವರ ಕೊಡಿರಿ:**

ಸಂಸ್ಥಾನಗಳ ಆಡಳಿತೆಯನ್ನು ಸಾಗಿಸುವುದು ಕಷ್ಟವಾಗಿ ಅದನ್ನು ಅನೇಕ ಜಿಲ್ಲೆಗಳಾಗಿ ವಿಭಾಗಿಸಿರುವರು. ಈ ಜಿಲ್ಲೆ ಆಡಳಿತೆಯು ವಿವಿಧ ಅಧಿಕಾರಿಗಳ ಮುಖಾಂತ ಸಾಗುವದು.

೧. **ಕಲೆಕ್ಟರ:**— ಜಿಲ್ಲೆಯಲ್ಲಿ ಶಾಂತಿ ಕಾಯುವುದೂ ತನ್ನ ಕೈಕೆಳಗಿನವರಿಗೆ ಕೆಲಸಗಳನ್ನು ಹಂಚುವುದೂ ಸುವ್ಯವಸ್ಥೆ ಯಿಡುವುದೂ ಇವನ ಅಧಿಕಾರವಿದ್ದು ಜಿಲ್ಲಾ ಮುಖ್ಯಾಧಿಕಾರಿ ಇವನು. ಅಲ್ಲದೇ ಇವನಿಗೆ ಜಿಲ್ಲೆಯ ಇತರ ಖಾತೆಗಳ ಕುರಿತು ಸ್ವಲ್ಪವಾದರೂ ಸಂಬಂಧವಿದೆ.

ಸ್ಥಳಿಕ ಸಮಸ್ಯೆಗಳನ್ನು ವಿಚಾರಿಸಿ, ಜಿಲ್ಲೆಯಲ್ಲಿ ಸಂಚರಿಸುತ್ತ ವಿವಿಧ ಜನರ ಭಾವವನ್ನು ತಿಳಿದುಕೊಂಡು ಬಹಳ ಕಾರ್ಯ ದಕ್ಷತೆಯಿಂದ ಕೆಲಸ

ಮಾಡುವನು. ಇವನಿಗೆ ವಿವಿಧ ಸಮಸ್ಯೆಗಳ ಕುರಿತು ಪೂರ್ಣ ಜ್ಞಾನವಿರ ಬೇಕಾಗುವುದು. ಅಲ್ಲದೆ ಜಿಲ್ಲೆಯ ಮ್ಯಾಜಿಸ್ಟ್ರೇಟನೂ ಈತನೆ ಆಗಿರುವನು.

೨. **ಮಾಮ್ಲೇತ್ದಾರ**:— ಜಿಲ್ಲೆಯನ್ನು ತಾಲೂಕುಗಳೆಂದು ವಿಭಾಗಿಸಿ ಪ್ರತಿಯೊಂದು ತಾಲೂಕಿಗೆ ಒಬ್ಬ ಮಾಮ್ಲೇತ್ದಾರನು ಅಧಿಕಾರಿಯಾಗಿದ್ದು ತಾಲೂಕು ಮತ್ತು ಜಿಲ್ಲೆಯ ಸೇತುವೆಯಂತಿರುವನು. ಕಲೆಕ್ಟರನಷ್ಟೆ ಅಧಿಕಾರ ಇವನಿಗೆ ತಾಲೂಕಿನಲ್ಲಿದೆ. ಭೂಕಂದಾಯ ವಸೂಲಿ, ತಾಲೂಕಿನ ಶಾಂತಿ, ವ್ಯವಸ್ಥೆ, ಹಕ್ಕುಗಳನ್ನು ಕಾಯುವುದು ಇವನ ಮುಖ್ಯ ಕೆಲಸ.

೩. **ಶಿರಸ್ತೆದಾರ ಮತ್ತು ಸರ್ಕಲ್ ಇನ್ಸ್ಪೆಕ್ಟರು**:— ಇವರೂ ತಾಲೂಕಿನ ಅಧಿಕಾರಿಗಳು. ಮಾಮ್ಲೇತ್ದಾರರಿಗೆ ಸಹಕಾರಿಗಳಾಗಿ ಕೆಲಸ ಮಾಡುವುದು ಇವರ ಕರ್ತವ್ಯ.

೪. **ಡಿಪುಟಿ ಕಲೆಕ್ಟರ**:— ಮೂರು ನಾಲ್ಕು ತಾಲೂಕುಗಳನ್ನು ಕೂಡಿಸಿ ಒಂದು ಸಹ ವಿಭಾಗ (Sub divisions) ಮಾಡಿರುವರು. ಇದರ ಅಧಿಕಾರ ಡೆಪ್ಯುಟಿ ಕಲೆಕ್ಟರ ಕ್ಕೆಗಿದೆ. ಅವರು ಕಲೆಕ್ಟರ ಮತ್ತು ಮಾಮ್ಲೇತ್ದಾರರ ನಡುವೆ ಸೇತುವೆಯಂತಿದ್ದು ಕಲೆಕ್ಟರರಿಗೆ ಸಹಕಾರವನ್ನು ಮಾಮ್ಲೇತ್ದಾರರ ಮೇಲ್ವಿಚಾರಣೆಯನ್ನು ಮಾಡುತ್ತಾರೆ.

೫. **ಪಾಟೀಲರು**:— ಇವನು ಹಳ್ಳಿಯ ಅಧಿಕಾರಿ. ಭೂಕಂದಾಯ ವಸೂಲಿ, ಹಳ್ಳಿಯ ನ್ಯಾಯ ತೀರ್ಮಾನ, ಶಾಂತಿ ವ್ಯವಸ್ಥೆ ಇಡುವುದು, ಜನನಮರಣ ಲೆಕ್ಕವನ್ನಿಡುವುದು ಇವೇ ಇವನ ಕೆಲಸಗಳು. ಇವನಿಗೆ ಪೋಲೀಸ್ ಪಾಟೀಲ ಹಾಗೂ ಮುಲ್ಕೀಗೌಡರ ಸಹಾಯ ಕೊಡಲಾಗಿದೆ.

೬. **ಕುಲಕರ್ಣಿಗಳು**:— ಪಾಟೀಲನ ಭೂಕಂದಾಯ ವಸೂಲಿಯಲ್ಲಿ ಸಹಕಾರ ಮಾಡಿ ಅದರ ಲೆಕ್ಕಪತ್ರಗಳನ್ನಿಡುವುವೇ ಇವನ ಕೆಲಸ.

೭. **ಉಗ್ರಾಣಿ**:— ಇವನು ಹಳ್ಳಿಯ ಪೋಲೀಸನು. ರಾತ್ರಿಯಲ್ಲಿ ಹಳ್ಳಿಯಲ್ಲಿ ಗಸ್ತಿತಿರುಗುತ್ತಾನೆ ಮತ್ತು ಹಳ್ಳಿ—ತಾಲೂಕುಗಳ ನಡುವೆ ಸುದ್ದಿ ತಿಳಿಸುತ್ತಾನೆ.

೮. **ಜಿಲ್ಲಾ ಪೋಲೀಸ್ ಸುಪರಿಂಡೆಂಟ**:— ಇವನು ಜಿಲ್ಲೆಯ ಎಲ್ಲ ಪೋಲೀಸ್ ಅಧಿಕಾರಿಗಳ ಮೇಲ್ವಿಚಾರಕನೂ ಪೋಲೀಸ ಪಡೆಯ ಮುಖ್ಯಸ್ಥನೂ ಆಗಿರುವನು.

೯. **ಇಂಜನೀಯರು** :– ಜಿಲ್ಲೆಯಲ್ಲಿನ ರಸ್ತೆ ಮತ್ತು ಕಟ್ಟಡಗಳ ಮೇಲ್ವಿಚಾರಕ್ಕೆ ಎಗ್ಸಿಕ್ಯೂಟಿವ್ ಇಂಜನಿಯರೂ ಓವ್ಹರ್ಸಿಯರೂ ಇರುತ್ತಾರೆ.

೧೦. **ನ್ಯಾಯಾಧೀಶ** :– ಇವನು ಜಿಲ್ಲೆಯ ನ್ಯಾಯಾಧೀಶನಿದ್ದು ನ್ಯಾಯ ವಿಚಾರಣೆಗಳನ್ನು ನಡೆಸಿ ಶಿಕ್ಷಿಸುವನು. ತಾಲೂಕ ಮ್ಯಾಜಿಸ್ಟ್ರೇಟರಿಂದ ಮೇಲ್ನೋಡಲ್ಪಟ್ಟ ಇಲ್ಲವೆ ಅಪೀಲು ಮಾಡಲ್ಪಟ್ಟ ಕೇಸುಗಳನ್ನು ವಿಚಾರಿಸುವನು.

೧೧. **ಸಿವ್ಹಿಲ್ ಸರ್ಜನ್** :– ಇವನು ಜಿಲ್ಲಾ ಸರಕಾರಿ ಡಾಕ್ಟರನಾಗಿ ಕೆಲಸ ಮಾಡುವನು.

೧೨. **ಶಿಕ್ಷಣಾಧಿಕಾರಿ** :– ಇವನು ಜಿಲ್ಲೆಯ ಶೈಕ್ಷಣಿಕ ಸಂಬಂಧಿಕ ಅಧಿಕಾರವುಳ್ಳವನಿದ್ದು ಅದರಲ್ಲಿ ಸುಧಾರಣೆ ಮೇಲ್ವಿಚಾರಣೆಗಳನ್ನು ಮಾಡುತ್ತಾನೆ.

ಇದಲ್ಲದೆ ಜಿಲ್ಲೆಯಲ್ಲಿ ಮುನಸಿಪಾಲಿಟಿ ಗ್ರಾಮ ಪಂಚಾಯ್ತು, ಜಿಲ್ಲಾ ನ್ಯಾಯಾಲಯ, ಸೆಸೆನ್ಸ್‌ಕೋರ್ಟ್ಸ, ಮ್ಯಾಜಿಸ್ಟ್ರೇಟ ಕೋರ್ಟ್ಸ, ಎಜ್ಯುಕೇಶನಲ್ ಬೋರ್ಡ್ಸ, ಸಿವ್ಹಿಲ್ ಆಸ್ಪತ್ರೆ ಮೊದಲಾದ ವಿವಿಧ ಸಂಸ್ಥೆಗಳೂ ಇರುತ್ತವೆ.

## 53. A) What do you understand by local self Government? ಸ್ಥಾನಿಕ ಸ್ವರಾಜ್ಯ ಸಂಸ್ಥೆ ಕುರಿತು ನಿಮಗೇನು ತಿಳಿದಿದೆ?

ಸ್ಥಳೀಯ ಆಡಳಿತೆಯನ್ನು ಸ್ಥಳೀಯ ಜನರು ಸಾಗಿಸುವುದೇ ಸ್ಥಾನಿಕ ಸ್ವರಾಜ್ಯ ಪದ್ಧತಿ. ಆಡಳಿತೆ ಸೂತ್ರಗಳೆಲ್ಲ ಸ್ಥಳಿಕರಿಗೇ ಸಂಬಂಧಿಸಿದ್ದು, ಅವು ಸ್ಥಳಿಕರ ಕೈಯಲ್ಲಿ ಇರುವವು. ಕೇಂದ್ರ ಸರಕಾರಕ್ಕೆ ಇದರಿಂದ ತುಂಬ ಸಹಕಾರ ಸಿಗುತ್ತದೆ. ಸ್ಥಳೀಯ ಸಮಸ್ಯೆಗಳ ಬಗ್ಗೆ ಸ್ಥಳಿಕರಿಗೆ ಮಾಹಿತಿ ಹೆಚ್ಚಾಗಿದ್ದು ಅವರು ಕಾರ್ಯಗಳನ್ನು ದಕ್ಷತೆಯಿಂದ ಮಾಡುವರು. ಕೇಂದ್ರಾಧಿಕಾರಿಗಳು ಒಂದೆಡೆಗೆ ಇದ್ದು ದೇಶದಾದ್ಯಂತದ ವ್ಯವಹಾರಗಳಿಗೆಲ್ಲ ತಲೆ ಹಾಕುವುದು ಸಾಧ್ಯವಿದೆಯೆ? ಮತ್ತು ಹೆಚ್ಚಿನ ಅಧಿಕಾರಿಗಳನ್ನು ನೇಮಿಸಬೇಕಾಗುತ್ತೆ. ಅಲ್ಲದೆ ಹಣದ ವೆಚ್ಚ ಅಧಿಕವಾಗುತ್ತದೆ. ಈ ಪದ್ಧತಿ

ಯಿಂದ ಜನರಿಗೆ ರಾಜ್ಯಾಡಳಿತೆ ಮಾಹಿತಿಯೂ ದೊರೆತು ಕೇಂದ್ರದ ಕಡೆ ಅವರ ಸಂಬಂಧ ಬೆಳೆಯಲು ಅನುವಾಗುತ್ತದೆ ಶಿಸ್ತಿನಿಂದ ಕೆಲಸ ಸಾಗುತದೆ.

B) Give the reasons for the failure of local self Government in India. ಭಾರತದಲ್ಲಿ ಸ್ಥಾನಿಕ ಸಂಸ್ಥೆಗಳು ಅವನತಿ ಪಡೆಯಲು ಕಾರಣವೇನು ?

ನಮ್ಮಲ್ಲಿ ಕೆಟ್ಟಚಾಳಿಯೆಂದರೆ ಜನರು ವಿಚಾರಿಸದೆ ಮತ ಕೊಡುವುದು—ಸ್ವಾರ್ಥತ್ಯಾಗವಿಲ್ಲ—ಯೋಗ್ಯ ಪ್ರತಿನಿಧಿಗಳು ಇದರಿಂದಾಗಿ ಆರಿಸಿ ಬರದೆ ಅಶ್ಲೀಲರು ಅಧಿಕಾರಕ್ಕೆ ಬರುವುದು. ಜನರಲ್ಲಿ ವಿಶಾಲ ಹೃದಯ ಬೇಕು. ನೈತಿಕ ಮಟ್ಟವೂ ಕಡಿಮೆ ಇದೆ. ಸ್ಥಳಿಕ ಜನರಲ್ಲಿ ವ್ಯವಹಾರಿಕ ಕಲಹಗಳುಂಟಾಗಿ ವಿರೋಧ ಕಾರ್ಯನಿರತರಾಗುತ್ತಾರೆ. ಇದರಿಂದ ಸರಕಾರವೂ ನಡುನಡುವೆ ಕೈ ಹಾಕುವುದು. ಈ ಎಲ್ಲ ಕಾರಣಗಳಿಂದ ಈ ಸಂಸ್ಥೆ ಅವನತಿಗಿಳಿಯುವುದು.

54. Suggest the administration, duties, sources of income and items of expenditure of locol self Government. ಸ್ಥಾನಿಕ ಸಂಸ್ಥೆಯ ಘಟನೆ, ಕರ್ತವ್ಯ, ಆಯ ಮತ್ತು ವ್ಯಯಗಳನ್ನು ಹೇಳಿರಿ.

೧. ಗ್ರಾಮ ಪಂಚಾಯ್ತು :- ಪ್ರಾಚೀನ ಕಾಲದಿಂದಲೂ ಈ ಸಂಸ್ಥೆ ಬಳಕೆಯಲ್ಲಿತ್ತು. ಈಗ ಸುಮಾರು ಎರಡು ಸಾವಿರ ಜನವಸತಿಯುಳ್ಳ ಪ್ರತಿ ಹಳ್ಳಿಗೂ ಈ ಸಂಸ್ಥೆ ಇದ್ದೇ ಇದೆ.

ಊರಿನ ಮತದಾರರು ಚುನಾವಣೆಯಿಂದ, ಸಾಮಾನ್ಯವಾಗಿ ಏಳು ಜನರವರೆಗೆ ಸದಸ್ಯರನ್ನು ಆರಿಸುತ್ತಾರೆ. ಆ ಸದಸ್ಯರು ತಮ್ಮೊಳಗೊಬ್ಬನನ್ನು ಆರಿಸಿ ಅಧ್ಯಕ್ಷನಾಗಿ ಮಾಡುವರು. ಅಲ್ಲದೆ ಸರಕಾರವು ಒಬ್ಬ ಕಾರ್ಯದರ್ಶಿಯನ್ನು ತನ್ನ ಖರ್ಚಿನಿಂದ ನೇಮಿಸುತ್ತದೆ. ೫ ಸದಸ್ಯರು ಈ ಸಂಸ್ಥೆಯಲ್ಲಿ ನ್ಯಾಯ ತೀರ್ಮಾನ ಮಾಡುತ್ತಾರೆ. ಹಾಗೂ ದಂಡ ವಿಧಿಸುವರು. ಸುಮಾರು ೩ ವರ್ಷದ ವರೆಗೆ ಒಮ್ಮೆ ಆರಿಸಿದ ಸದಸ್ಯರು ಅಧಿಕಾರದಲ್ಲಿ ಉಳಿಯುವರು.

**ಕರ್ತವ್ಯಗಳು** :– ಹಳ್ಳಿಯ ಸ್ವಚ್ಛತೆ, ಶಿಸ್ತು, ಭಧ್ರತೆ ನೋಡಿಕೊಳ್ಳುವುದು. ನೀರಿನ ಪೂರೈಕೆ ಮಾಡುವುದು. ರಸ್ತೆ ಕೆರೆಕಾಲುವೆಗಳನ್ನು ದುರಸ್ತಿ ಮಾಡುವುದು. ನದಿಗೆ ಒಡ್ಡು ಹಾಕಿಡುವುದು. ಜಾತ್ರೆ ಪೇಟೆಗಳ ವಿಚಾರ ಮಾಡುವುದು. ಹಾಗೂ ಐಚ್ಛಿಕವಾಗಿ ಜನಹಿತದ ಬೇರೆ ಕರ್ತವ್ಯಗಳನ್ನು ಅನುಕೂಲಕ್ಕೆ ತಕ್ಕಂತೆ ಮಾಡುವುದು.

**ಆದಾಯ** :– ಜಾತ್ರೆ, ಸಂತೆಗಳ ಮೇಲೆ, ಮನೆಗಳ ಮೇಲೆ, ಮಾರಾಟದ ಮೇಲೆ, ವಾಹನಗಳ ಮೇಲೆ ಹಾಕುವ ಕರಗಳು, ಪಂಚರು ವಿಧಿಸಿದ ದಂಡದ ಹಣ ಮತ್ತು ಲೋಕಲ್ ಬೋರ್ಡು ಪೂರೈಸುವ ಹಣ.

**ವ್ಯಯಃ** :– ಹಳ್ಳಿಯ ಸುಧಾರಣೆಗೆಂದು ಅನೇಕ ವಿಧದಿಂದ ಖರ್ಚುಗಳು ಬರುತ್ತವೆ.

**೨. ನಗರ ಸಭೆಗಳು** :– ಇದರಲ್ಲಿ ಮೂರು ವಿಭಾಗ ಮಾಡಬಹುದು. ದೊಡ್ಡ ಪಟ್ಟಣಗಳಲ್ಲಿ ಮುನಸಿಪಲ್ ಬರೋಗಳೂ ಚಿಕ್ಕ ಪಟ್ಟಣಗಳಲ್ಲಿ ಮುನಿಸಿಪಾಲಿಟಿಗಳು. ಮತ್ತು ಪ್ರಾಂತದ ಮುಖ್ಯ ಸ್ಥಳದಲ್ಲಿ ಕೊರ್ಪೊರೇಶನ್‌ಗಳೂ ಇರುತ್ತವೆ.

ಈ ನಗರ ಸಭೆಯನ್ನು ವ್ಯವಹಾರದ ಸುಗಮಕ್ಕಾಗಿ "ಸ್ಟ್ಯಾಂಡಿಂಗ್ ಕಮಿಟಿ"—(ಇದು ಎಲ್ಲ ವ್ಯವಹಾರದ ಮೇಲೆ ಲಕ್ಷ್ಯ ಪೂರೈಸುವುದು.) "ಸ್ಕೂಲ್ ಬೋರ್ಡ ಕಮಿಟಿ"—(ಮುನಸಿಪಲ್ ಶಾಲೆಗಳ ಮೇಲ್ವಿಚಾರಣೆ ಮಾಡುವುದು.) ಎಂಬ ಎರಡು ವಿಭಾಗಗಳಾಗಿ ಮಾಡುತ್ತಾರೆ. ಜಿಲ್ಲಾ ಕಲೆಕ್ಟರು ಇದರ ಕೆಲಸಗಳ ಮೇಲ್ವಿಚಾರ ಮಾಡುತ್ತಾರೆ. ಪ್ರಾಂತಿಕ ಸರಕಾರವಾದರೂ ಇವುಗಳ ಮೇಲೆ ನಿಯಂತ್ರಣವಿಟ್ಟು ಅಸಭ್ಯ ವರ್ತನೆ ಕಂಡರೆ ಕೂಡಲೆ ಅವನ್ನು ರದ್ದುಗೊಳಿಸುವುದು.

ಪ್ರೌಢ ಮತದಾನ ಪದ್ಧತಿಯಂತೆ ಪ್ರತಿ ಮೂರು ವರ್ಷಕ್ಕೆ ಸದಸ್ಯರನ್ನಾರಿಸುವರು. ಆ ಸದಸ್ಯರು ತಮ್ಮೊಳಗೆ ಅಧ್ಯಕ್ಷ, ಉಪಾಧ್ಯಕ್ಷರನ್ನಾರಿಸುವರು. ಬರೋ ಮುನಿಸಿಪಾಲಿಟಿಗೆ ಮುಖ್ಯಾಧಿಕಾರಿ (ಚೀಫ್ ಆಫೀಸರ್) ಇರುತ್ತಾರೆ. ಅಲ್ಲದೆ ಆರೋಗ್ಯಾಧಿಕಾರಿ, ಇಂಜನಿಯರು ಶಿಕ್ಷಣಾಧಿಕಾರಿಗಳೂ ಇರುತ್ತಾರೆ.

**ಕರ್ತವ್ಯಗಳು :–** ಅವಶ್ಯವಾಗಿ ಅದು ಸಾರ್ವಜನಿಕ ಆರೋಗ್ಯ, ಸುರಕ್ಷತೆ. ಶಿಕ್ಷಣ, ಸೌಕರ್ಯಗಳನ್ನು ನೋಡಿಕೊಂಡು ಪಟ್ಟಣಕ್ಕೆ ನೀರಿನ, ದೀಪದ ವ್ಯವಸ್ಥೆ, ಬೀದಿಗಳ ಸ್ವಚ್ಛತೆ, ಅವಘಡಗಳಬಗ್ಗೆ ಮುಂಜಾಗ್ರತೆ, ರೋಗಗಳು ಹರಡುವಾಗ ವ್ಯಾಕ್ಸಿನ್ ತೆಗೆಸುವುದು, ಜನನ ಮರಣ ರಿಜಿಸ್ಟ್ರಿ ಇಡುವುದು ಇತ್ಯಾದಿ—ಮತ್ತು ಐಚ್ಛಿಕವಾಗಿ ಅನುಕೂಲಕ್ಕೆ ತಕ್ಕಂತೆ ವಾಚನಾಲಯ ವಸ್ತುಸಂಗ್ರಹಾಲಯ, ನಗರ ವನ ಮತ್ತು ಅಲ್ಲಿ ರೇಡಿಯೋ ವ್ಯವಸ್ಥೆ ಮಾಡುವುದು—ಇತ್ಯಾದಿ ಕರ್ತವ್ಯಗಳನ್ನು ಮಾಡಬಹುದು.

**ಆದಾಯ :–** ನಳ, ದೀಪ, ವಾಹನ, ಮನೆ, ಮೊದಲಾದವುಗಳ ತೆರಿಗೆ, ಯಾತ್ರಿಕರ ಮೇಲೆ ಸುಂಕ, ಸಂತೆಯಿಂದ ಬರುವ ಸುಂಕ, ಮುನಿಸಿಪಲ್ ಶಾಲೆಗಳಿಂದ ಬರುವ ಆದಾಯ ಮತ್ತು ಸರಕಾರ ಕೊಡುವ ಗ್ರ್ಯಾಂಟ್ ಅಲ್ಲದೆ ಆಕ್ಟ್ರಾಯ್ ಕರ ಇತ್ಯಾದಿ.

**ವ್ಯಯ :–** ರಸ್ತೆ ರಿಪೇರಿ, ಪಾಯಿಖಾನೆ ಮೊದಲಾದವುಗಳ ಸ್ವಚ್ಛತೆ, ಶಿಕ್ಷಣ ವೆಚ್ಚ, ಆಸ್ಪತ್ರೆ ವೆಚ್ಚ ಇತ್ಯಾದಿ ಸಾರ್ವಜನಿಕ ಹಿತಕ್ಕಾಗಿ ಖರ್ಚು.

**೩. ಲೋಕಲ್ ಬೋರ್ಡು :–** ಇವು ಜಿಲ್ಲೆಗೊಂದರಂತೆ ಸಾಮಾನ್ಯವಾಗಿ ಇರುತ್ತವೆ. ಇದರಲ್ಲೂ ಚುನಾವಣೆಯಿಂದಲೇ ಸದಸ್ಯರನ್ನಾರಿಸುವರು. ಪ್ರಾಂತಿಕ ಶಾಸನ ಸಭೆಗೆ ಮತ ಕೊಡುವ ಹಕ್ಕುಳ್ಳವರು ಮಾತ್ರ ಲೋಕಲ್ ಬೋರ್ಡ ಸದಸ್ಯರಿಗೆ ಮತ ಕೊಡಬಹುದು. ಮೂರು ವರ್ಷಗಳ ವರೆಗೆ ಅವರಿಗೆ ಅಧಿಕಾರ. ಎಲ್ಲ ಕೆಲಸಗಳನ್ನು ನಡಿಸಲಿಕ್ಕೆ ಸ್ಟ್ಯಾಂಡಿಂಗ್ ಕಮೀಟಿಯೊಂದಿರುತ್ತದೆ. ಅದರಲ್ಲಿ ಐದರಿಂದ ಏಳರವರೆಗೆ ಸದಸ್ಯರಿರುವರು. ಮತ್ತು ಸಾರ್ವಜನಿಕ ಆರೋಗ್ಯಾಧಿಕಾರಿ, ಇಂಜನೀಯರು ಮೊದಲಾದವರನ್ನು ನೇಮಿಸುತ್ತೆ. ( ಕರ್ತವ್ಯ, ಆಯವ್ಯಯಗಳೆಲ್ಲ ನಗರ ಸಭೆಗಳಂತೆಯೆ. )

55. Give differnt systems of Control of Local bodies by the Central Government. ಕೇಂದ್ರ ಸರಕಾರವು ಸ್ಥಾನಿಕ ಸಂಸ್ಥೆಗಳನ್ನು ನಿಯಂತ್ರಿಸುವ ರೀತಿಗಳನ್ನು ಹೇಳಿರಿ.

ಸ್ಥಾನಿಕ ಸಂಸ್ಥೆಗಳ ಕಾರ್ಯಕರ್ತರು ಅಯೋಗ್ಯರೆಂದು ಕಂಡು ಬಂದರೆ ಅವರನ್ನು ಕಿತ್ತು ಹಾಕಿ ಹೊಸ ಸಮಿತಿಯನ್ನು ರಚಿಸಬಹುದು. ಸ್ಥಳೀಯ ಸಮಸ್ಯೆಗಳ ಬಗ್ಗೆ ಮಾಡುವ ಯಾವುದೇ ಕಾಯ್ದೆ ನೀತಿಗಳನ್ನು ವಿಮರ್ಶಿಸಿ ಶಿಫಾರಸು, ಇಲ್ಲವೆ ರದ್ದು ಮಾಡುವುದು. ಸ್ಥಳೀಯ ಕರಗಳನ್ನು ರದ್ದು ಮಾಬಹುದು. ಮತ್ತು ಸ್ಥಳೀಯ ಸಂಸ್ಥೆಗಳ ವೆಚ್ಚದ ನಿಯಂತ್ರಣ ಮಾಡಿ ಲೆಕ್ಕ ಪತ್ರಗಳನ್ನೂ ಶೋಧಿಸುತ್ತಿರುವುದು. ಅಂತೂ ಸ್ಥಾನಿಕ ಸಂಸ್ಥೆಗಳು ಕೇಂದ್ರ ಸರಕಾರದ ನೀತಿಗನುಕೂಲವಾಗಿ ನಡೆಯಬೇಕಾಗುತ್ತದೆ. ಇಲ್ಲದಿದ್ದರೆ ಅವು ರದ್ದಾಗುವವು.

56. Write some sentences on · " Control of Local bodies in Bomboy state· ( ೫೫ ನೇ ಉತ್ತರ ಬರೆಯಿರಿ. )

57. Describe the powers and duties of the President of India· ಭಾರತದ ಅಧ್ಯಕ್ಷನ ಅಧಿಕಾರ ಮತ್ತು ಕರ್ತವ್ಯಗಳನ್ನು ವಿವರಿಸಿರಿ.

ಅಧ್ಯಕ್ಷನ ಕಾರ್ಯಾಧಿಕಾರಗಳನ್ನು ನಾಲ್ಕು ವಿಭಾಗವಾಗಿ ಹೇಳಬಹುದು.

೧. ಶಾಸನಾಧಿಕಾರ – ವರ್ಷಕ್ಕೆರಡು ಸಲವಾದರೂ ( ತನಗೆ ಬೇಕಾದಾಗ) ಸಭೆಗಳನ್ನು ಕರೆದು–ಭಾಷಣ ಮಾಡಬಹುದು ಇಲ್ಲವೆ ಸಂದೇಶ ಕಳುಹಬೇಕು. ಇಮ್ಮನೆಗಳಲ್ಲಿ ಮತಭೇದ ಹುಟ್ಟಿದರೆ ಒಮ್ಮೆಲೇ ಎರಡೂ ಮನೆಗಳನ್ನು ಕರೆಯಬಹುದು. ಸಭೆಗಳನ್ನು ಮುಂದೂಡುವ, ಪ್ರಜಾ ಸಭೆಯನ್ನು ಮುಗಿಸುವ ಅಧಿಕಾರವಿದೆ. ಕಾಯ್ದೆಗಳು ಪಾಸಾಗ ಬೇಕಾದರೆ ಅಧ್ಯಕ್ಷನು ಸಹಿ ಹಾಕಿ ಒಪ್ಪಿಗೆ ಕೊಡಬೇಕು. ತನ್ನ ಅನಿವಾರ್ಯ ಸಂದರ್ಭಗಳಲ್ಲಿ ಸುಗ್ರೀವಾಜ್ಞೆಗಳನ್ನು ಹೊರಡಿಸಬಹುದು.

೨. ಕಾರ್ಯಕಾರಿ ಶಾಖಾಧಿಕಾರ:– ಅಧ್ಯಕ್ಷನ ಹೆಸರಿನಲ್ಲಿ ರಾಷ್ಟ್ರದ ಪ್ರತಿಯೊಂದು ವ್ಯವಹಾರವೂ ನಡೆಯುವುದು. ಮೇಲಧಿಕಾರಿಗಳನ್ನು ನಿಯಮಿಸಿ ಅಧಿಕಾರ ಕೊಡುವ ಅಧಿಕಾರವೂ ಅವನದೆ. ಪರದೊಡನೆ ಯುದ್ಧ ಅಥವಾ ಒಪ್ಪಂದಗಳನ್ನು ಮಾಡುವ ಅಧಿಕಾರವಿದೆ.

**೩. ಹಣಕಾಸಿನ ಅಧಿಕಾರ:-** ಬಜೆಟ್ ಸಿದ್ಧಮಾಡಿ ಪ್ರತಿ ವರ್ಷ ಶಾಸನ ಸಭೆಗೆ ಕಳುಹಬೇಕು. ಗ್ರ್ಯಾಂಟಗಳ ಬೇಡಿಕೆಗೆ ಮನ್ನಣೆಕೊಡುವ, ಆರ್ಥಿಕ ಮಸೂದೆಗಳನ್ನು ಶಾಸನ ಸಭೆಗೆ ತೀರ್ಪಿಗೆ ಕಳುಹುವ ಅಧಿಕಾರ ಇದೆ. ಸರಕಾರಿ ಆದಾಯಗಳಿಂದ ಕೂಡಿದ ಹಣದ ವಿತರಣ ಮತ್ತು ಆದಕ್ಕೆ ಸಹಾಯಕ್ಕಾಗಿ "ಆರ್ಥಿಕ ಕಮಿಶನ್" ನೇಮಿಸುವ ಅಧಿಕಾರವಿದೆ.

**೪. ನ್ಯಾಯಾಧಿಕಾರ:-** ಯಾವುದೇ ಕಾರಣಕ್ಕಾಗಿ ದೇಹಾಂತ ಶಿಕ್ಷೆ ಪಡೆದವರ, ಹಾಗೂ ಇತರ ವಿಧದ ಶಿಕ್ಷೆ ಪಡೆದವರ ಬಿಡುಗಡೆಮಾಡಿ ಶಿಕ್ಷೆಯ ಅವಧಿ ಮುಂದೂಡುವ, ಅಥವಾ ಶಿಕ್ಷೆಯನ್ನು ಕಡಿಮೆ ಮಾಡುವ ಅಧಿಕಾರವಿದ್ದು ಸಹಕಾರಿ ಕಾಯ್ದೆ ವಕೀಲನೊಬ್ಬನನ್ನು ಆ ಕಾರ್ಯದಲ್ಲಿ ನೆರವಿಗೆ ಇಟ್ಟುಕೊಳ್ಳುತ್ತಾನೆ.

## 58. What are the emergency powers of the President? ರಾಷ್ಟ್ರಾಧ್ಯಕ್ಷನ ಅತ್ಯವಸರದ ಪ್ರಾಸಂಗಿಕ ಅಧಿಕಾರಗಳೇನು?

ಪರರಿಂದ ದೇಶಕ್ಕೆ ದಾಳಿಯಾದರೆ ದೇಶರಕ್ಷಣೆ ಮತ್ತು ಶಾಂತಿಕಾಯುವುದು. ದೇಶದಲ್ಲಿ ಅಂತರ್ ಕಲಹಗಳು ಹುಟ್ಟಿದರೆ ಸಂಸ್ಥಾನಗಳು ಘಟನೆಗೆ ವಿರೋಧ ವರ್ತಿಸಿದರೆ ರಾಷ್ಟ್ರಾಧ್ಯಕ್ಷನು ಒಂದು ಪ್ರಕಟನೆ ಹೊರಡಿಸಿ ಪರಿಸ್ಥಿತಿ ಹಿಡಿತಕ್ಕೆ ತರುತ್ತಾನೆ. ಆಗ ಕಾರ್ಯಾನುಕೂಲತೆಗಾಗಿ ಇರುವ ಕಾನೂನುಗಳನ್ನು ರದ್ದು ಮಾಡುವ, ಹೊಸ ಕಾನೂನುಗಳನ್ನು ಜಾರಿಗೆ ತರುವ, ನಾಗರಿಕನ ವಿಶಿಷ್ಟ ಹಕ್ಕುಗಳನ್ನು ಅಲಕ್ಷಿಸುವ, ಸಂಸ್ಥಾನಗಳಿಗೆ ಕೊಡಬೇಕೆಂದಿರುವ ಸರಕಾರಿನ ಹಣವನ್ನು ಕಡಿಮೆ ಅಥವಾ ಹೆಚ್ಚು ಮಾಡುವ ತಾತ್ಪೂರ್ತಿಕ ಅಧಿಕಾರಗಳೂ ಇವೆ. ಆದರೆ ಈತನ ಆ ಪ್ರಕಟನೆ ಕೇವಲ ಎರಡು ತಿಂಗಳು ಜಾರಿಯಲ್ಲಿ ಉಳಿದು, ಬೇಕಾದರೆ ಪುನಃ ಹೊಸ ಪ್ರಕಟನೆ ಹೊರಡಿಸಬೇಕಾಗುವುದು, ಆದರೆ ಪಾರ್ಲಿಮೆಂಟಿನ ಒಪ್ಪಿಗೆಯೂ ಅವನಿಗೆ ಬೇಕಾಗುತ್ತದೆ.

## 59. Write some lines on :- 1) President 2 Vice president. 3) Cabinet system. 4) Ordinence. ಟಿಪ್ಪಣಿ ಬರೆಯಿರಿ.

## ೧. ರಾಷ್ಟ್ರಾಧ್ಯಕ್ಷ

**ಯೋಗ್ಯತೆ:–** ಅವನು ರಾಜನೀತಿಯಲ್ಲಿ ಕುಶಲನೂ ವ್ಯವಹಾರ ನಿಪುಣನೂ, ವಿವೇಕಶಾಲಿಯೂ ಇರಬೇಕು. ಭಾರತದ ನಾಗರಿಕನೂ ೩೫ ವರ್ಷ ಮೀರಿದವನೂ ಕೇಂದ್ರ ಸರಕಾರದ ಪ್ರಜಾ ಸಭೆಯ ಕೆಳಮನೆಗೆ ಸ್ಪರ್ಧಿಸಲು ಯೋಗ್ಯತೆವುಳ್ಳವನೂ ಆಗಿದ್ದು ಅವನು ಸರಕಾರಿ ನೌಕರನಾಗಲಿ, ಕೇಂದ್ರ ಯಾ, ಘಟಕ ಸಂಸ್ಥಾನಗಳ ಶಾಸನ ಮಂಡಲದ ಸದಸ್ಯನಾಗಲಿ ಆಗಿರಬಾರದು.

**ಚುನಾವಣೆ:–** ಇವನನ್ನು ಲೇಜಿಸ್ಲೇಟಿವ್ ಅಸೆಂಬ್ಲಿಯ ಮತ್ತು ಪಾರ್ಲಿಮೆಂಟಿನ ಚುನಾಯಿತ ಸದಸ್ಯರು ಗುಪ್ತ ಮತದಾನ ಪದ್ಧತಿಯಿಂದ ಆರಿಸಬೇಕು. ( ಒಬ್ಬ ಸದಸ್ಯನು ಒಂದೇ ಮತ ಕೊಡುವುದು. ) ಆರಿಸಿ ಬಂದನಂತರ ವರಿಷ್ಠ ನ್ಯಾಯಾಧೀಶರೆದುರು ಪ್ರತಿಜ್ಞಾ ವಿಧಿಯನ್ನು ಕೈಕೊಳ್ಳಬೇಕು.

**ಮರ್ಯಾದೆ:–** ಅವನಿಗೆ ಇರಲಿಕ್ಕೆ ಉಚಿತ ವಸತಿ, ತಿಂಗಳಿಗೆ ೧೦ ಸಾವಿರ ರೂಪಾಯಿಗಳೂ ಮತ್ತಿತರ ಆವಶ್ಯಕ ಭತ್ತೆಗಳೂ ಇರುತ್ತವೆ ಅಧಿಕಾರದಲ್ಲಿರುವಾಗ ಅವನು ಮಾಡಬಹುದಾದ ಯಾವುದೇ ವ್ಯವಹಾರಕ್ಕೆ ಯಾರಿಂದಲೂ ತಡೆಯಿಲ್ಲ. ಆದರೆ ಘಟನೆಯ ವಿರುದ್ಧ ವರ್ತಿಸಿದಲ್ಲಿ ಅವನನ್ನು ಪಾರ್ಲಿಮೆಂಟು 'ಇಂಪೀಚ್‌ಮೆಂಟ' ವಿಚಾರಣೆಗೆ ಗುರಿಮಾಡುತ್ತದೆ. ಹೆಚ್ಚು ಸದಸ್ಯರ ಮತಾಧಿಕ್ಯವಾದರೆ ಅಧಿಕಾರದಿಂದ ತಳ್ಳಲೂಬಹುದು. ಅವನ ಅಧಿಕಾರದವಧಿ ೫ ವರ್ಷವಾದರೂ ಅದರೊಳಗೂ ರಾಜೀನಾಮೆ ಕೊಡಬಹುದು.

**೨. ಉಪಾಧ್ಯಕ್ಷ:–** ಪಾರ್ಲಿಮೆಂಟಿನ ಇಮ್ಮನೆಗಳ ಸಾಮ್ಯಕೇ ಪ್ರಮಾಣ ಮತದಾನದಿಂದ ಆರಿಸುವರು. ಅವನು ಕೇಂದ್ರದ ಕೆಳಮನೆಗೆ ಚುನಾವಣೆಗೆ ನಿಲ್ಲುವ ಯೋಗ್ಯತೆವುಳ್ಳವನಿರಬೇಕು. ( ಉಳಿದ ಲಕ್ಷಣಗಳು ಅಧ್ಯಕ್ಷನಂತೆಯೇ) ಅಧ್ಯಕ್ಷನು ಕಾಯಿಲೆಬಿದ್ದಾಗ, ತೀರಿಕೊಂಡಾಗ, ರಾಜೀನಾಮೆ ಕೊಟ್ಟಾಗ ಬೇರೊಬ್ಬನು ಪದವಿಗೆ ಬರುವವರೆಗೆ ತಾನೇ ಅಧ್ಯಕ್ಷನ ಹೆಸರಿನಲ್ಲಿ ಎಲ್ಲ ವ್ಯವಹಾರ ಸಾಗಿಸಿ ಅಧ್ಯಕ್ಷನ ಮರ್ಯಾದೆಗಳನ್ನೆಲ್ಲ ಹೊಂದುವನು.

**೩. ಮಂತ್ರಿಮಂಡಳಿ ಪದ್ಧತಿ:–** ಶಾಸನ ಮಂಡಲದ ಬಹುಮತ ಪಕ್ಷವೇ ಮಂತ್ರಿಮಂಡಳವೆಂದಾರಿಸಲ್ಪಡುವುದು. ಎಲ್ಲ ಮಂತ್ರಿಗಳೂ ಒಂದೇ ಪಕ್ಷದವರಿರಬೇಕು ಮತ್ತು ಶಾಸನ ಮಂಡಲದ ಸದಸ್ಯರೂ ಆಗಿರಲೇಬೇಕು. ಇದರ ಮುಖ್ಯಸ್ಥನೇ ಮುಖ್ಯ ಮಂತ್ರಿ. ಎಲ್ಲರೂ ಕೂಡಿಯೇ ಅಧಿಕಾರಕ್ಕೆ ಬಂದು ಎಲ್ಲರೂ ಕೂಡಿಯೇ ಬಿಡಬೇಕು. ಮತ್ತು ಒಬ್ಬನ ಕೆಲಸಗಳಿಗೆ ಎಲ್ಲರೂ ಹೊಣೆಗಾರರು.

ಅವರಿಗೆ ವೇತನವನ್ನು ಪಾರ್ಲಿಮೆಂಟೇ ನಿಶ್ಚಯಿಸುತ್ತದೆ. ಅವರ ಸಂಖ್ಯೆ ನಿರ್ಧಿಷ್ಟವಿಲ್ಲ, ಅಧಿಕಾರದವಧಿ ೫ ವರ್ಷವಾದರೂ ಕಾರಣಾಂತರ ಗಳಿಂದ ನಡುವೆಯೆ ಯಾರಾದರೂ ರಾಜೀನಾಮೆ ಕೊಡಬಹುದು. ಮಂತ್ರಿ ಮಂಡಲಕ್ಕೆ ಒಂದು ನೀತಿಯಿದ್ದು ಅದರಂತೆ ಪ್ರತಿ ಮಂತ್ರಿಯೂ ನಡೆಯು ವನು. ಅವರು ಶಾಸನ ಸಭೆಗೆ ಹೊಣೆಗಾರರಿದ್ದು, ಯಾವುದೇ ಸದಸ್ಯನು ಕೇಳುವ ಪ್ರಶ್ನೆಗಳಿಗೆ ಯಾವುದೇ ಮಂತ್ರಿಯು ಉತ್ತರಿಸ ಬೇಕಾಗುತ್ತದೆ. ಅಂತೂ ಮಂತ್ರಿಮಂಡಲವು ಸಾಂಘಿಕ ಹೊಣೆಗಾರಿಕೆಯಿಂದ ಕೆಲಸಮಾಡುವ ಒಂದು ಸಂಸ್ಥೆಯಿದ್ದು ಸರಕಾರವು ಹೊರಪಡಿಸುವ ನೀತಿಗಳನ್ನು ವಿರೋಧಿ ಸಲು ಅದಕ್ಕೆ ಅಧಿಕಾರವಿಲ್ಲ.

**೪. ಸುಗ್ರೀವಾಜ್ಞೆ :–** ಏನಾದರೂ ವಿಕಟ ಪರಿಸ್ಥಿತಿಯುಂಟಾಗಿ, ದೇಶದ ಶಾಂತತೆಗೆ ಧಕ್ಕೆ ಬರುವಂತಿದ್ದರೆ, ಆಗ ಶಾಸನ ಮಂಡಲಗಳ ಅಧಿ ವೇಶನ ಕೂಡಿರದಿದ್ದರೆ ಅಧ್ಯಕ್ಷನೇ ತಾತ್ಪೂರ್ತಿಕ ಪರಿಸ್ಥಿತಿ ಸುಧಾರಣೆಗಾಗಿ ಪ್ರಕಟಣಾ ಮೂಲಕ ಆಜ್ಞೆಗಳನ್ನು ಹೊರಡಿಸ ಬೇಕಾಗುತ್ತದೆ. ಅಧ್ಯಕ್ಷನು ಮೊದಲು ಇದನ್ನು ಪಾರ್ಲಿಮೆಂಟಿನ ಇದುರು ಇಟ್ಟು ಒಪ್ಪಿಗೆ ಪಡೆಯಬೇಕು. ಪಾರ್ಲಿಮೆಂಟಿನ ಅಧಿವೇಶನ ಸೇರಿದ ಮೇಲೆ ಸುಮಾರು ೬ ವಾರಕ್ಕೂ ಮಿಕ್ಕಿ ಈ ಸುಗ್ರೀವಾಜ್ಞೆ ಜಾರಿಯಲ್ಲಿರದು. ಅದರೊಳಗೆ ಅಧ್ಯಕ್ಷನು ಹಿಂತೆಗೆದು ಕೊಳ್ಳಬೇಕು.

## 60. Explain the Union Legislature and its functions. ಒಕ್ಕೂಟ ಶಾಸನ ಮಂಡಳದ ಹಾಗೂ ಅದರ ಕಾರ್ಯದ ವಿವರ ಕೊಡಿರಿ.

ಆದಕ್ಕೆ ಇಷ್ಮನೆಯ ಪಾರ್ಲಿಮೆಂಟೂ ರಾಷ್ಟ್ರಾಧ್ಯಕ್ಷನೂ ಸೇರುತ್ತಾರೆ. ಇದರ ಮೇಲ್ಮನೆ ( Council of states ) ಕಾಯಂ ಇರುವುದು.

೧ ಸುಮಾರು ೨೫೦ರಷ್ಟು ಸದಸ್ಯರಿರುವರು. ಅವರು ೬ ವರ್ಷ ಅಧಿಕಾರ ದಲ್ಲುಳಿಯುವರು. ಅವರಲ್ಲಿ ೨೩೮ ಸದಸ್ಯರು ಘಟಕ ಸಂಸ್ಥಾನಗಳಿಂದ ಗುಪ್ತ ಮತದಾನ ಪದ್ಧತಿಯಿಂದ ಆರಿಸಲ್ಪಟ್ಟವರೂ, ೧೨ ಸದಸ್ಯರು ಅಧ್ಯಕ್ಷನಿಂದ ಆರಿಸಲ್ಪಟ್ಟವರೂ ಆಗಿರುವರು. ಉಪಾಧ್ಯಕ್ಷನು ಈ ಸಭೆ ಕೂಡಿದಾಗ ಸಭಾಧ್ಯಕ್ಷನಾಗುತ್ತಾನೆ. ಅವನ ಸಹಕಾರಕ್ಕೆ ಉಪಸಭಾ ಪತಿಯಿರುವನು. ಅವರಿಗೆ ಮತಹಾಕುವ ಅಧಿಕಾರವಿಲ್ಲ. (ಅಭಿಪ್ರಾಯ ಮತ ಮಾತ್ರ ಕೊಡ ಬಹುದು) ಈಸಭೆಗಳನ್ನು ಮುಂದುವರಿಸುವ ಇಲ್ಲವೆ ನಡೆಸುವ ಅಧಿಕಾರ ಅಧ್ಯಕ್ಷನಿಗದೆ. (ಸುಮಾರು ೨ ಸಲವಾದರೂ ಕರೆಯಲೇಬೇಕು.) ಈ ಸಭೆಯ ಸದಸ್ಯನು ಭಾರತದ, ೩೦ ವರ್ಷ ಮೀರಿದ ನಾಗರಿಕನಿರಬೇಕು ಅವನು ಬೇರೆ ಸರಕಾರಿ ಹುದ್ದೆ ಸ್ವೀಕರಿಸಿದರೆ, ನಾಗರಿಕತೆ ಕಳೆದುಕೊಂಡರೆ, ಅಥವಾ ೬೦ ದಿನ ಬಿಡದೆ ಸಭೆಗೆ ಬಾರದಿದ್ದರೆ ಅವನನ್ನು ಸಭೆಯು ಹೊರಗೆ ಹಾಕುವುದು. ವಾಕ್ ಸ್ವಾತಂತ್ರ್ಯವಿದೆ. (ನ್ಯಾಯಾಧಿಕಾರಿಗಳ ವಿಷಯ ಬಿಟ್ಟು) ಸದಸ್ಯರಲ್ಲ ದವರಿಗೆ ಸಭೆಯಲ್ಲಿ ಪ್ರವೇಶವಿಲ್ಲ. ಪ್ರವೇಶಿಸಿದರೆ ರೂ ೫೦೦ ದಂಡವಿದೆ. ಈ ಮನೆಯು ಸಾರ್ವಜನಿಕ ಸಮಸ್ಯೆಗಳ ವಿಚಾರಣೆಗಾಗಿ ತನ್ನ ಧೋರಣೆ ಮುಂದಿಡುವುದರಿಂದ, ಪ್ರಶ್ನೆಗಳನ್ನು ಕೇಳುವುದರಿಂದ, ಕುಟಿಲ ಠರಾವು ಗಳನ್ನು ಮಂಡಿಸುವುದರಿಂದ ಕಾರ್ಯಕಾರೀ ಶಾಖೆಯು ಅದರ ನಿಯಂತ್ರಣ ದಲ್ಲಿರುತ್ತದೆ. ಹಣ ಕಾಸಿನ ಮಸೂದೆಗಳಲ್ಲದೆ ಬೇರೆಲ್ಲ ಮಸೂದೆಗಳು ಮೊದಲು ಇಲ್ಲಿ ಮಂಡಿಸಲಾಗುವುವು.

೨ ಇದರ ಕೆಳಮನೆ ( House of the people ) ಪ್ರಜಾ ಸಭೆಯು. ಇದಕ್ಕೆ ೫೦೦ ಸದಸ್ಯರನ್ನು ಪ್ರತ್ಯಕ್ಷ ಪ್ರೌಢ ಮತದಾನದಿಂದ ಆರಿ ಸುವರು. ಇದರಲ್ಲಿ ಭಾಷಣಗಾರ ಮತ್ತು ಉಪ ಭಾಷಣಗಾರರಿದ್ದು ಸಭೆ ಯಲ್ಲಿ ಅವರೇ ಅಧ್ಯಕ್ಷರಾಗುತ್ತಾರೆ. ಇವರಿಗೂ ಮತದಾನಾಧಿಕಾರವಿಲ್ಲ. (ಅಭಿಪ್ರಾಯ ಮತ ಕೊಡಬಹುದು.) ಸಭೆಯನ್ನು ಮುಂದುವರಿಸುವ, ನಡೆ ಸುವ ಅಧಿಕಾರ [illegible]ಕ್ಷನಿಗೆ ಇದೆ. ಸದಸ್ಯರು ೨೫ ವರ್ಷ ಮೀರಿದ ಭಾರ ತ[illegible] ನಾಗರಿಕ[illegible] ಹಣಕಾಸಿನ ಮಸೂದೆ ಮೊದಲು ಇಲ್ಲಿ ಮಂಡಿ

ಸಲ್ಪಡಬೇಕು. ಅದಕ್ಕೆ ಹಣಕಾಸಿನ ವಿಷಯದಲ್ಲಿ ಮೇಲ್ಮನೆಗಿಂತ ಹೆಚ್ಚು ಅಧಿಕಾರವಿದೆ. ಉಳಿದ ಮಸೂದೆಗಳಾದರೂ ಇಲ್ಲಿಂದ ಪಾಸಾದ ಮೇಲೆಯೆ ಕಾಯ್ದೆಯೆನಿಸುವುದು. ಉಳಿದ ಲಕ್ಷಣಗಳು ಮೇಲ್ಮನೆಯಂತೆಯೆ.

61. How the Bill become law in the union Legislature? ಒಕ್ಕೂಟ ಶಾಸನ ಮಂಡಳದಲ್ಲಿ ಮಸೂದೆಯು ಕಾಯ್ದೆಯಾಗುವುದೆಂತು?

ಮಸೂದೆಗಳು ಮೊದಲು ಎರಡೂ ಮನೆಗಳಲ್ಲಿ ಪಾಸಾಗಿ ಅಧ್ಯಕ್ಷನ ರುಜುವಾತಿಗೆ ಹೋಗುತ್ತವೆ. ಅಧ್ಯಕ್ಷನು ಕೂಡಲೆ ತನ್ನ ಒಪ್ಪಿಗೆ ಸಹಿ ಹಾಕಬಹುದು. ಇಲ್ಲವೆ ಶಾಸನ ಮಂಡಲಕ್ಕೆ ವಿಮರ್ಶೆಗೆ ಕಳುಹ ಬಹುದು. ಮತ್ತೆ ಅದು ಅಲ್ಲಿಂದ ಶಿಫಾರಸು ಪಡೆದು ಬಂದರೆ ಅಧ್ಯಕ್ಷನು ಸಹಿ ಹಾಕಲೇಬೇಕು ಇಮ್ಮನೆಗಳಲ್ಲಿ ಆ ಕಾಯ್ದೆ ಕುರಿತು ಮತಭೇದವಿದ್ದರೆ ಸಂಯುಕ್ತ ಮಂಡಲವು ಕೂಡಿ ಬಹುಮತವಿದ್ದಂತೆ ನಿರ್ಣಯ ಮಾಡಲಾಗುವದು. ಹಣಕಾಸಿನ ಮಸೂದೆ ಮಾತ್ರ ಮೊದಲು ಕೆಳಮನೆಯಲ್ಲಿ ಪಾಸಾಗಿ ಮೇಲ್ಮನೆಗೆ ಹೋಗಬೇಕು. ಮೇಲ್ಮನೆಯು ೧೪ ದಿನದೊಳಗೆ ತನ್ನ ನಿರ್ಣಯವನ್ನು ಕೆಳಮನೆಗೆ ತಿಳಿಸಬೇಕು. ಆಗ ಅಭಿಪ್ರಾಯದಲ್ಲಿ ಭೇದವಿದ್ದರೆ ಮೇಲ್ಮನೆಯ ನಿರ್ಣಯವನ್ನು ಕೆಳಮನೆಯು ಅಲಕ್ಷಿಸಬಹುದು. ಮತ್ತೆ ಆ ಮಸೂದೆಗೆ ಅಧ್ಯಕ್ಷನು ಸಹಿ ಹಾಕಿ ಕಾಯ್ದೆಯಾಗಿ ಮಾರ್ಪಡಿಸುವನು.

62. Write short notes on: 1) the Prime minister of Indian union 2) the Prime minister of a province. 3) Provincial Cabinet 4) Casting Vote 5) Budget. **ಟಿಪ್ಪಣಿ** ಬರೆಯಿರಿ.

**೧. ಒಕ್ಕೂಟ ಭಾರತದ ಪ್ರಧಾನ ಮಂತ್ರಿ**:— ಇವನೇ ಮಂತ್ರಿ ಮಂಡಲದ ಪ್ರಧಾನ. ರಾಷ್ಟ್ರಾಧ್ಯಕ್ಷನಿಂದ ಅಧಿಕಾರ ಪಡೆದು ಇತರ ಮಂತ್ರಿಗಳನ್ನಾರಿಸಿ ಅಧಿಕಾರ ವಿತರಣೆ ಮಾಡುತ್ತಾನೆ. ಅವರ ಮೇಲ್ವಿಚಾರಣೆ ಮಾಡುವುದು ಪಾರ್ಲಿಮೆಂಟಿನಲ್ಲಿ ವಿವಿಧ ಸಮಸ್ಯಗಳ ಕುರಿತು ಮಾತಾಡುವದು. ಮಂತ್ರಿಗಳ ಅಭಿಪ್ರಾಯ ಅಧ್ಯಕ್ಷನಿಗೂ, ಅಧ್ಯಕ್ಷನ ನೀತಿಯನ್ನು ಮಂತ್ರಿ

ಗಳಿಗೂ ವಿಶದ ಪಡಿಸುವುದು ತನ್ನ ಮಂಡಲದೊಂದಿಗೆ ರಾಷ್ಟ್ರಾಧ್ಯಕ್ಷನಿಗೆ ಸದಾ ಸಹಕಾರಿಯಾಗಿರುವುದು. ಯುದ್ಧ ಮತ್ತು ಪ್ರಾಸಂಗಿಕಸಮಯಗಳಲ್ಲಿ ಅಧ್ಯಕ್ಷನಿಗೆ ನೆರವು ಮತ್ತು ಒಪ್ಪಿಗೆ ಸೂಚಿಸುವುದು ಇತ್ಯಾದಿ ಅಧಿಕಾರ ಪಡೆದಿರುತ್ತಾನೆ. ಅಧ್ಯಕ್ಷನು ಅತ್ಯವಸರದ ಪ್ರಸಂಗಿಕ ಸಮಯಗಳಲ್ಲಾದರೂ ತನ್ನ ಅಧಿಕಾರವನ್ನು ಪ್ರಯೋಗಿಸಲು ಪ್ರಧಾನ ಮಂತ್ರಿಯ ಅಭಿಪ್ರಾಯ ಕೇಳುತ್ತಾನೆ.

**೨. ಪ್ರಾಂತಿಕ ಮುಖ್ಯ ಮಂತ್ರಿ:–** ಪ್ರಾಂತಿಕ ಗವರ್ನರನು ಶಾಸನ ಸಭೆಗಳ ಬಹುಮತ ಪಕ್ಷದ ಮುಖ್ಯಸ್ಥನನ್ನು ಮುಖ್ಯ ಮಂತ್ರಿಯೆಂದು ನೇಮಿಸುವನು. ಮತ್ತೆ ತನ್ನ ಸಹಕಾರ ಮಂತ್ರಿ ಮಂಡಲವನ್ನು ಮುಖ್ಯ ಮಂತ್ರಿಯೆ ಆರಿಸುವನು. ಅವರ ಮೇಲ್ವಿಚಾರಣೆ ಮಾಡುವುದು ಅಧಿಕಾರ ವಿತರಣೆ ಮಾಡುವುದು, ಅವುಗಳಿಂದ ಗವರ್ನರನು ಬಯಸುವ ನೀತಿಗಳನ್ನು ತಿಳಿಯುವುದು, ಅವುಗಳು ನಿಶ್ಚಯಿಸಿದ ಘೋರಣೆಯನ್ನು ಗವರ್ನರನಿಗೆ ತಿಳಿಸುವುದೂ ಅವನ ಮುಖ್ಯ ಕರ್ತವ್ಯಗಳು. ಜವಾಬ್ದಾರಿ ಹೊಣೆ ಎಲ್ಲವೂ ಒಕ್ಕೂಟ ಭಾರತದ ಪ್ರಧಾನ ಮಂತ್ರಿಯಂತೆಯೆ ಇವನಿಗೆ ಪ್ರಾಂತದಲ್ಲಿರುತ್ತದೆ.

**೩. ಪ್ರಾಂತಿಕ ಮಂತ್ರಿಮಂಡಲ:–** ಗವರ್ನರನ ವ್ಯವಹಾರದಲ್ಲಿ ಸಹಕಾರಕ್ಕೆಂದು ಒಂದು ಪ್ರತ್ಯೇಕ ಮಂತ್ರಿಮಂಡಲವಿದೆ. ಅವರ ಸಲಹೆಯಂತೆ (Descreation Powers ಬಿಟ್ಟು) ಗವರ್ನರನು ನಡೆಯಬೇಕು. ಪ್ರತಿಯೊಬ್ಬ ಮಂತ್ರಿಯೂ ಶಾಸನಸಭೆಯ ಸದಸ್ಯನಿದ್ದು ಸಾಂಘಿಕ ಹೊಣೆಯಿಂದ ವ್ಯವಹಾರ ನಡೆಸಬೇಕು, ಇವರು ಶಾಸನ ಸಭೆಗಳಲ್ಲಿ ಭಾಗ ವಹಿಸಬಹುದಾದರೂ ಮತಕೊಡುವ ಅಧಿಕಾರವಿಲ್ಲ. ಉಳಿದ ಲಕ್ಷಣಗಳು ಕೇಂದ್ರ ಮಂತ್ರಿಮಂಡಲದಂತೆಯೆ.

**೪. ಅಭಿಪ್ರಾಯ ಮತ:–** ಒಕ್ಕೂಟದ ಅಥವಾ ಸಂಸ್ಥಾನದ ಯಾವುದೇ ಸಭಾ ಸದಸ್ಯರು ಯಾವದೊಂದು ಸಮಸ್ಯೆಯ ಬಗ್ಗೆ ಚುನಾವಣೆಗೆ ಮತ ಹಾಕಿದಾಗ ನಿರ್ಣಯ ಕೊಡಲು ತಪೆಯಾದರೆ, ಇತ್ತಂಡಗಳಿಗೂ ಸಮವಾಗಿ ಮತ ಬಿದ್ದರೆ ಆ ಸಭೆಯ ಅಧಿಪತಿಯು ತನ್ನ ಒಂದು ಮತ

ವನ್ನು ತನ್ನ ಅಭಿಪ್ರಾಯದಂತೆ ಯಾವುದೇ ಸಮಸ್ಯೆಗೆ ಕೊಟ್ಟು ಚುನಾವಣೆ ಯನ್ನು ಯಶಸ್ವಿಗೊಳಿಸುವನು. ಅದೇ ಅಭಿಪ್ರಾಯ ಮತ.

**೫. ಮುಂಗಡ ಆರ್ಥಿಕ ಪತ್ರಿಕೆ:**– ಪ್ರತಿ ವರ್ಷಾರಂಭದಲ್ಲಿ ಶಾಸನ ಸಭೆಯೆದುರು ಆ ವರ್ಷದ ಖರ್ಚಿನ ಮತ್ತು ಆದಾಯದ ಅಂದಾಜು ಪಟ್ಟಿಗಳನ್ನು ರಚಿಸಿ ಮಂಡಿಸಬೇಕಾಗುವುದು. ಅದನ್ನು ಪರಾಂಭರಿಸಿದ ಮೇಲೆ ಶಾಸನ ಸಭೆಯು ಶಿಫಾರಸು ಮಾಡಲಾದ ವಿಷಯಗಳನ್ನು ಮಾತ್ರ ಸಂಗ್ರಹಿಸಿ ಅದರಂತೆಯೆ ಆ ವರ್ಷದ ಖರ್ಚು ಆದಾಯಗಳು ನಡೆಯು ವಂತೆ ಏರ್ಪಾಡು ಮಾಡುತ್ತದೆ.

## 63. Explain state Legislature and its functions. ಘಟಕ ಸಂಸ್ಥಾನಿಕ ಶಾಸನ ಮಂಡಳ ಮತ್ತದರ ಕಾರ್ಯ ಗಳನ್ನು ವಿವರಿಸಿರಿ.

ಇದಕ್ಕೊಬ್ಬ ಗವ್ಹರ್ನರನಿರುವನು. ಕೆಲವು ಸಂಸ್ಥಾನಗಳಲ್ಲಿ ಮೇಲ್ಮನೆ ಮತ್ತು ಕೆಳಮನೆಯೆಂದು ಇಮ್ಮನೆಗಳಿರುತ್ತವೆ. ಕೆಲವು ಕಡೆ ಒಂದೇ ಇರುತ್ತವೆ.

**೧. ಕೆಳಮನೆ:**– ( Legislative Assembly ) ಇದರ ಸದಸ್ಯ ರನ್ನು ಪ್ರೌಢ ಮತದಾನ ಪದ್ಧತಿಯಲ್ಲಿ ಆರಿಸುತ್ತಾರೆ. ೭೫ ಸಾವಿರ ಜನ ಸಂಖ್ಯೆವುಳ್ಳ ಪ್ರತಿ ಪ್ರದೇಶಕ್ಕೆ ಒಬ್ಬ ಸದಸ್ಯನನ್ನು ಹಂಚಲಾಗಿದೆ. ಈ ಸಭೆಯಲ್ಲಿ ೬೦ ರಿಂದ ೫೦೦ ರ ವರೆಗೆ ಮಾತ್ರ ಸದಸ್ಯರಿರಬೇಕೆಂದು ನಿರ್ಣ ಯಿಸಲಾಗಿದೆ. ಈ ಸಭೆಗೆ ಹಣಕಾಸಿನ ವಿಚಾರವಾಗಿ ಹೆಚ್ಚಿನ ಅಧಿಕಾರ ವಿದೆ. ಇದರಲ್ಲಿ ಭಾಷಣಗಾರನೂ ಉಪಭಾಷಣಗಾರನೂ ಇರುತ್ತಾರೆ.

**೨. ಮೇಲ್ಮನೆ:**– ( Legislative Council ) ಇದರಲ್ಲಿ ಕೆಳ ಮನೆಯಲ್ಲಿನ ಒಟ್ಟು ಸದಸ್ಯರ ಸಂಖ್ಯೆಯ ೩/೪ ದಷ್ಟು ಸದಸ್ಯರಿರುವರು. ಅವರಲ್ಲಿ ೧/೩ ಅಂಶ ಸ್ಥಾನಿಕ ಸಂಸ್ಥೆಗಳಿಂದಲೂ, ೧/೧೨ ಅಂಶ ಭಾರತದ ವಿಶ್ವ ವಿದ್ಯಾಲಯ ಪದವೀಧರರಿಂದಲೂ, ೧/೧೨ ಅಂಶ ಉಳಿದ ಶೈಕ್ಷಣಿಕ ಸಂಸ್ಥೆ ಗಳಿಂದಲೂ, ೧/೩ ಅಂಶ ಕೆಳಮನೆಯ ಸದಸ್ಯರಿಂದಲೂ, ೧/೬ ಅಂಶ ಗವ್ಹರ್ನ ರನೂ, ಆರಿಸಿ ಕಳುಹಿಸುತ್ತಾರೆ. ಈ ಸದಸ್ಯರಲ್ಲಿ ಬಹು ಕುಶಲರೂ ನಿಷ್ಣಾತರೂ

ಇರುವರು. ಅವನು ಬಿಡದೆ ಸಭೆಗೆ ೬೦ ದಿನ ಗೈರು ಹಾಜರಾದರೆ ಅಧಿಕಾರ ಹೋಗುವುದು. ಅಥವಾ ಇತರ ವಿಷಯಕ್ಕಾಗಿ ಅವನನ್ನು ಪದವಿಯಿಂದ ಕಿತ್ತು ಹಾಕಲೂ ಬಹುದು. ಅವನು ಭಾರತದ ನಾಗರಿಕನಿದ್ದು ೩೦ ವರ್ಷ ಮೀರಿರಬೇಕು. ಈ ಮನೆಗೆ ಸಭಾಧ್ಯಕ್ಷನೂ ಉಪಸಭಾಧ್ಯಕ್ಷನೂ ಇರುವರು. ಇದು ನಿಶ್ಚಿತ ಸಭೆಯಾಗಿದ್ದು ಅದರ ಸದಸ್ಯರಲ್ಲಿ ಮಾತ್ರ ಎರಡು ವರ್ಷಕ್ಕೆ ⅓ ಅಂಶ ನಿವೃತ್ತರಾಗಬೇಕು.

ಹೀಗೆ ಎರಡೂ ಮನೆಗಳಿಗೆ ಅಧಿಕಾರದಲ್ಲಿ ಸಮಾನತೆ ಇದ್ದರೂ ಕೆಳ ಮನೆಗೆ ಸ್ವಲ್ಪ ಹೆಚ್ಚಿನ ಅಧಿಕಾರವಿದೆ. ತಮ್ಮ ವ್ಯವಹಾರದ ಬಗ್ಗೆ ಆಯಾ ಮನೆಗಳೇ ನಿಶ್ಚಿತ ಪಟ್ಟಿಗಳನ್ನು ತಯಾರಿಸುವವು. ಎಲ್ಲ ಸದಸ್ಯರಿಗೂ ವಾಕ್ ಸ್ವಾತಂತ್ರ್ಯವಿದೆ. ( ನ್ಯಾಯಾಧೀಶರನ್ನು ಬಿಟ್ಟು ) ( ಹೀಗೆ ಉಳಿದ ಲಕ್ಷಣಾಧಿಕಾರಗಳೆಲ್ಲ ಒಕ್ಕೂಟ ಶಾಸನ ಸಭೆಯಂತೆಯೆ ಇವೆ. ) ವರ್ಷಕ್ಕೆ ಎರಡು ಸಲವಾದರೂ ಎಂಡೂ ಸಭೆಗಳ ಅಧಿವೇಶನವಾಗಲೇ ಬೇಕು. ಆಗ ನಡುವೆ ೬ ತಿಂಗಳಕ್ಕಿಂತ ಹೆಚ್ಚು ಅವಧಿಯಿರಬಾರದು.

## 64. How the bill become law in the state Legislature. ಘಟಕ ಸಂಸ್ಥಾನಿಕ ಶಾಸನ ಮಂಡಳದಲ್ಲಿ ಮಸೂದೆ ಕಾಯ್ದೆಯಾಗುವುದೆಂತು ?

ಮೊದಲು ಎರಡೂ ಮತಗಳಲ್ಲಿ ಪಾಸಾಗಿ ಗವ್ಹರ್ನರನ ರುಜುವಾತಿಗೆ ಹೋಗುತ್ತದೆ. ಆಗ ಗವರ್ನರನು ತನ್ನ ಸಹಿ ಹಾಕಬಹುದು, ಇಲ್ಲವೆ ಪುನರ್ವಿಮರ್ಶೆಗೆ ಶಾಸನ ಸಭೆಗೆ ಇಲ್ಲವೆ ರಾಷ್ಟ್ರಾಧ್ಯಕ್ಷನಿಗೆ ಕಳಿಸಬಹುದು. ಪುನಃ ಸರ್ವಮತದಿಂದ ಪಾಸಾಗಿ ಬಂದರೆ ಅವನು ರುಜುಹಾಕುತ್ತಾನೆ ಮತ್ತು ಮಸೂದೆಗೆ ಕಾಯ್ದೆ ಸ್ವರೂಪ ಕೊಡುತ್ತಾನೆ. ಹಣಕಾಸಿನ ಮಸೂದೆ ಗಳು ಮೊದಲು ಕೆಳಮನೆಯಲ್ಲಿ ಪಾಸಾಗಿ ಮೇಲ್ಮನೆಗೆ ಹೋಗಿ ೧೪ ದಿನ ಗಳೊಳಗೆ ನಿರ್ಧಾರ ತಿಳಿಸುವಂತೆ ಕೇಳಿಕೊಳ್ಳುವುದು. ಮೇಲ್ಮನೆ ವಿರೋಧ ವ್ಯಕ್ತಮಾಡಿದರೂ, ಮಾಡದಿದ್ದರೂ ಕೆಳಮನೆಯು ಪುನಃ ಪರಿಶೀಲಿಸಿ ಗವರ್ನರನಿಗೆ ಕಳುಹಿಸಿ ಕೊಡುವುದು. ಆಗ ಗವರ್ನರನು ಅದಕ್ಕೆ ಸಹಿ ಮಾಡಿ ಕಾಯ್ದೆ ರೂಪ ಕೊಡುತ್ತಾನೆ.

**65. How is the Governer of a Province appointed? What are his powers and functions ? ಪ್ರಾಂತಿಕ ಗವ್ಹರ್ನರ ನೇಮಕ ಮತ್ತು ಅವನ ಕಾರ್ಯ ಕಲಾಪ ಅಧಿಕಾರಗಳ ಕುರಿತು ಬರೆಯಿರಿ.**

ಇವನಕೈಯಲ್ಲಿಯೆ ಸಂಸ್ಥಾನದ ಎಲ್ಲಾ ಆಡಳಿತೆ ಇರುತ್ತದೆ. ರಾಷ್ಟ್ರಾಧ್ಯಕ್ಷನು ಇವನನ್ನು ನೇಮಿಸುತ್ತಾನೆ. ಇವನು ಪಾರ್ಲಿಮೆಂಟಿನ ಮತ್ತು ಶಾಸನ ಸಭೆಯ ಸದಸ್ಯನಿರದೆ ೩೫ ವರ್ಷ ಪೂರೈಸಿದ ಭಾರತದ ನಾಗರಿಕನಿರಬೇಕು. ಅಧಿಕಾರ ವಹಿಸುವಾಗ ಹೈಕೋರ್ಟಿನ ನ್ಯಾಯಾಧೀಶನೆದುರು ಪ್ರತಿಜ್ಞೆ ಮಾಡುತ್ತಾನೆ ಬೇರೆ ಯಾವುದೆ ನೌಕರಿ ಮಾಡಬಾರದು. ಅವನ ವೇತನವನ್ನು ಪಾರ್ಲಿಮೆಂಟು ನಿರ್ಧರಿಸುತ್ತದೆ. ಇದಲ್ಲದೆ ಸ್ಥಳ ಕೊಡಲಾಗುವುದು. ಸಮಾರು ೫ ವರ್ಷ ಅಧಿಕಾರದಲ್ಲಿದ್ದರೂ ಅವನಿಗೆ ರಾಜಿನಾಮೆ ಕೊಡಬಹುದು ಇಲ್ಲವೆ ಅಧ್ಯಕ್ಷನು ಅವನನ್ನು ತಳ್ಳಿಹಾಕಬಹುದು.

**ಕರ್ತವ್ಯ ಅಧಿಕಾರ:**– ಕಾರ್ಯಕಾರೀ ಸಂಬಂಧವಾಗಿ ಸರಕಾರಿ ವ್ಯವಹಾರಗಳು ಸರಿಯಾಗಿ ನಡೆಯಲೆಂದು ಸೂಚನೆಗಳನ್ನು ಮಾಡಬಹುದು. ಇವನ ಸಹಕಾರಕ್ಕಿರುವ ಮಂತ್ರಿಮಂಡಲದ ಅಭಿಪ್ರಾಯವನ್ನು ಮೊದಲು ಗವರ್ನರನು ಕೇಳಿಕೊಳ್ಳಲೇಬೇಕು ಕಾರ್ಯಕಾರಿ ಸಮಿತಿಯ ಪ್ರಮುಖನು ಇವನೆಂದಾದರೂ ವ್ಯವಹಾರವನ್ನೆಲ್ಲ ಮಂತ್ರಿಮಂಡಲವೇ ನಡೆಸುತ್ತದೆ. ಅಧ್ಯಕ್ಷನಿಂದ ನೇಮಿಸಲ್ಪಟ್ಟ ಸರಕಾರಿ ಪ್ರತಿನಿಧಿಯಾದ್ದು ಜನರ ಪ್ರತಿನಿಧಿಯೆಂದು ಹೇಳಲಾಗುವುದಿಲ್ಲ.

ಶಾಸನ ಸಂಬಂಧದಲ್ಲಿ ಅವನು ಸಭೆಗಳನ್ನು [illegible] ಕರೆಯಬಹುದು. ಎರಡು ಅಧಿವೇಶನಗಳ ನಡು ೬ ತಿಂಗಳಿಗಿಂತ ಹೆಚ್ಚು ಅಂತರವಾಗದೆ ವರ್ಷಕ್ಕೆ ಎರಡು ಸಲವಾದರೂ ಶಾಸನ ಸಭೆಗಳನ್ನು ಕರೆಯಲೇಬೇಕು. ಸಭೆಯನ್ನು ಮುಂದೂಡುವ, ಕೆಳಮನೆಯನ್ನು [illegible] ಅಧಿಕಾರ [illegible] ಇದೆ. ಸಭೆಯಲ್ಲಿ ಭಾಷಣ ಮಾಡುವುದು ಇಲ್ಲವೆ [illegible] ಕಳಿಸಬಹುದು. ಸಭೆಯನ್ನು ಕರೆಯುವ ಉದ್ದೇಶ ಮೊದಲೇ [illegible]. ಇವನ್ನನೆಗಳಲ್ಲಿ ತಿಕ್ಕಾಟ ಹುಟ್ಟಿದರೆ ಸಂಯುಕ್ತ ಸಭೆಯ[illegible]. ಶಾಸನ

ಸಭೆ ಪಾಸುಮಾಡುವ ಬಿಲ್ಲನ್ನು ಇವನು ಒಪ್ಪಿ ಸಹಿ ಹಾಕಬಹುದು—ಇಲ್ಲವೆ ಅಧ್ಯಕ್ಷನೆಡೆಗೆ ವಿಮರ್ಶೆಗೆ ಕಳುಹುವನು. ೬ ವಾರಗಳ ವರೆಗೆ ಸಂದರ್ಭಾನುಸಾರ ಸುಗ್ರೀವಾಜ್ಞೆಗಳನ್ನು ಜಾರಿಯಲ್ಲಿ ತರಬಹುದು. ( ಕೆಲ ವಿಶಿಷ್ಟ ವಿಷಯಗಳಲ್ಲಿ ಮಾತ್ರ ಅಧ್ಯಕ್ಷನ ಒಪ್ಪಿಗೆ ಬೇಕು. )

ಆರ್ಥಿಕ ಸಂಬಂಧವಾಗಿ ಬಜೆಟನ್ನು ಸಿದ್ಧ ಮಾಡಿ; ಗ್ರ್ಯಾಂಟ್ ಬೇಡಿಕೆಗಳನ್ನು ವಿಮರ್ಶಿಸಿ ಶಾಸನ ಸಭೆಗೆ ಹಾಜರು ಮಾಡುವುದು. ಹಣಕಾಸಿನ ವಿಷಯಕ್ಕಂತೂ ಇವನ ಅಭಿಪ್ರಾಯ ಬೇಕೇಬೇಕು.

ನ್ಯಾಯ ಸಂಬಂಧದಲ್ಲಿ ಇವನು ಶಿಕ್ಷೆಯಲ್ಲಿ ಬೇಕಾದ ಬದಲಾವಣೆ ಮಾಡಬಹುದು.

ಒಟ್ಟಾರೆ ರಾಷ್ಟ್ರಾಧ್ಯಕ್ಷನ ಅಧಿಕಾರವೆಲ್ಲ ಗವರ್ನರನಿಗೆ ಸಂಸ್ಥಾನದಲ್ಲಿದ್ದರೂ ಅವನು ಹೆಸರಿಗೆ ಮಾತ್ರ ಅಧಿಕಾರಿಯೆಂದಿದ್ದು ಮಂತ್ರಿಮಂಡಲವೇ ಎಲ್ಲ ಹೊಣೆ ಹೊತ್ತಿರುತ್ತದೆ.

## 66. Briefly survey the arrangement for the defence of India' ಭಾರತದ ಸಂರಕ್ಷಣೆಯ ಮಾದರಿಯನ್ನು ವಿವರಿಸಿರಿ.

ಮಂತ್ರಿಮಂಡಲದಲ್ಲಿ ಸಂರಕ್ಷಣ ಸದಸ್ಯನೊಬ್ಬನಿರುವನು ಮತ್ತು ಅವನ ಕೈಕೆಳಗೆ ಮುಖ್ಯ ಸೇನಾಪತಿ ಇರುತ್ತಾನೆ. ಸಂರಕ್ಷಣ ಖಾತೆಯನ್ನು ಕೆಳಗಿನಂತೆ ವಿಭಾಗಿಸಬಹುದು.

**೧. ಭೂಸೇನೆ :–** (Army) ಮುಖ್ಯ ಸೇನಾಪತಿಯು ( Chief of the Army ) ಇದರ ಅಧಿಕಾರಿಯು. ಈ ಸೇನೆಯಲ್ಲಿ ಪೂರ್ವದಲ, ಪಶ್ಚಿಮದಲ ಹಾಗೂ ದಕ್ಷಿಣ ದಲಗಳೆಂದು ವಿಭಾಗ ಮಾಡಲಾಗಿದೆ. ಅವುಗಳಿಗೆ ವಿವಿಧ ಯುದ್ಧ ಶಸ್ತ್ರೋಪಕರಣಗಳ ಉಪಯೋಗ–ತರಬೇತಿ ತಿಳಿದಿದ್ದು ಬಹು ಶಿಸ್ತಿನಿಂದ ಅದರ ಕಾರಭಾರ ಸಾಗುತ್ತದೆ. ದೇಶದ ಬೇರೆ ಬೇರೆ ಪ್ರದೇಶಗಳಲ್ಲಿ ಸೈನ್ಯ ತರಬೇತಿ ಶಾಲೆಗಳನ್ನು ತೆರೆಯಲಾಗಿದೆ.

**೨. ನೌಕಾಸೇನೆ :–** ( Navey force. ) ನೌಕಾದಲದಧಿಪತಿಯ ( Chief of the Navey staff ) ಆಧೀನ ವಿರುತ್ತದೆ. ಭಾರತದ

ಕರಾವಳಿಯು ಸುರಕ್ಷಿತವಿಲ್ಲದಿರುವದರಿಂದ ರಕ್ಷಣೆಯ ಮಹತ್ವ ಬಹಳವಿದೆ. ಅದಕ್ಕಾಗಿ ಭಾರತವು ಅನೇಕ ನೌಕೆಗಳನ್ನಿಟ್ಟುಕೊಂಡಿದೆ. ಅವುಗಳಲ್ಲಿ "ಡೆಲ್ಲಿ, ರಾಜಪೂತ್, ರಣಜಿತ್. ರಾಣಾ, ನಾಸಿಕ್, ಕಲ್ಕತ್ತ, ಕೊಚ್ಚಿನ್, ಅಮೃತ್‌ಸರ್–" ಮೊದಲಾದವು ಮುಖ್ಯವಾದವು. ನೌಕಾದಲದ ಶಿಕ್ಷಣಕ್ಕಾಗಿ ವಿಶಾಖಪಟ್ಟಣ, ಜೆರಾಡಸ್, ಕೊಚ್ಚಿನ್‌ಗಳಲ್ಲಿ ಶಾಲೆಗಳಿದ್ದು ಉಚ್ಚ ಶಿಕ್ಷಣಕ್ಕೆ ಇಂಗ್ಲೆಂಡಿಗೆ ಹೋಗಬೇಕು.

೩. **ವಾಯುದಲ :–** (Air force) ವಾಯುದಲಾಧಿಪತಿಯೊಬ್ಬನಿರುತ್ತಾನೆ. ಜಲ, ನೆಲಸೇನೆಗಳಿಗಿಂತಲೂ ರಕ್ಷಣೆಯ ಸಹಕಾರಕ್ಕೆ ವೈಮಾನಿಕದಲವು ಬಹಳ ಉಪಯೋಗಬಿದೆ. ಅದಕ್ಕೆ ಭಾರತವು ಒಟ್ಟು ಸಂರಕ್ಷಣವೆಚ್ಚದ 8% ಅಂಶ ವೆಚ್ಚಮಾಡುವುದಲ್ಲದೆ ಇನ್ನು ಬೆಳೆಸುತ್ತಿದೆ. ಶಿಕ್ಷಣವನ್ನು ಕೊಯಂಬುತ್ತೂರು, ಜೋಧಪುರ, ಅಂಬಾಲ, ಆಗ್ರ ಮತ್ತು ಮದ್ರಾಸು ಬೆಂಗಳೂರುಗಳಲ್ಲಿ ಕೊಡಲಾಗುತ್ತಿದೆ.

೪. **ಪ್ರಾದೇಶಿಕ ಸೈನ್ಯ :–** (Territorial forces) ಭಾರತವನ್ನು ಎಂಟು ವಿಭಾಗ ಮಾಡಿ ಅವುಗಳಲ್ಲಿ ಶಿಕ್ಷಣ ಕೇಂದ್ರಗಳನ್ನಿರಿಸಲಾಗಿದೆ. ೩ತಿಂಗಳ ವರೆಗೆ ಸೈನಿಕ ಶಿಕ್ಷಣ ಕೊಡಲಾಗುವುದು. ಕಲಿಯುತ್ತಿರುವಂತೆಯೆ ಅವರು ತಮ್ಮ ನೌಕರಿ ಮಾಡುತ್ತಿರಬಹುದು. ಅವಶ್ಯಕ ಸಮಯದಲ್ಲಿ ಸರಕಾರಕ್ಕೆ ಅವರ ಉಪಯೋಗ ಸಿಗುವುದು. ದೇಶದ ಆಂತರಿಕ ರಕ್ಷಣೆಗೆ ತುಂಬ ಸಹಕಾರ ವಾಗುವುದು.

೫. **ಗೃಹ ರಕ್ಷಕದಲ :–** (Home Guards.) ಪ್ರತಿ ಊರಿನಲ್ಲು ಈ ಶಿಕ್ಷಣ ಕ್ರಮವನ್ನಿರಿಸಲಾಗಿದೆ. ಇವರು ಪೋಲೀಸರಿಗೂ ಅವರ ಕರ್ತವ್ಯದಲ್ಲಿ ಸಹಾಯಕರಾಗಿರುತ್ತಾರೆ. ಊರೂರುಗಳಲ್ಲಿಯೂ ಅವರಿದ್ದು ಶಾಂತಿಗಾಗಿ ಯತ್ನಿಸುವರು.

ಇಷ್ಟೆ ಅಲ್ಲದೆ ವಿದ್ಯಾರ್ಥಿಗಳಿಗೂ ಸೈನಿಕ ಶಿಕ್ಷಣ ಅನುಕೂಲತೆ ಕೊಡಬೇಕೆಂದು ಶಾಲೆ ಕಾಲೇಜುಗಳಲ್ಲಿ N. C. C. ಎಂಬ ತರಬೇತಿ ವರ್ಗಗಳನ್ನು ತೆರೆಯಲಾಗಿದೆ. ಏನೇ ಆದರೂ ಭಾರತದ ಸೈನ್ಯ ಮಾದರಿ ಉತ್ತಮವಾದುದೆಂದರೂ ಬೇರೆ ರಾಷ್ಟ್ರಗಳೊಡನೆ ಹೋಲಿಸಿದರೆ ನಮ್ಮ ಸೇನಾಪಡೆ

ತೀರಾ ಚಿಕ್ಕದೂ ಆಗಿದೆ. ಪ್ರತಿಯೊಬ್ಬ ನಾಗರಿಕನು ಸೈನಿಕ ಶಿಕ್ಷಣವನ್ನು ಒಂದಲ್ಲ ಒಂದು ವಿಧದಿಂದ ಪಡೆಯುವ ಬಗ್ಗೆ ಸರಕಾರವು ಅನೇಕ ಅನುಕೂಲ ಗಳನ್ನು ಒದಗಿಸುತ್ತಿದೆ.

**67. What are the sources of income and heads of expenditure of the Indian union. ಭಾರತದ ಒಕ್ಕೂಟ ಸರಕಾರದ ಆದಾಯ ವ್ಯಯಗಳಾವವು.**

**ಅಧಾಯ:-** ಅಬಕಾರೀ ಕರಗಳು, ಕೊರ್ಪೊರೇಶನ್ ಕರ, ಕಂಪನಿ ಗಳು ಹಾಕುವ ಬಂಡವಳದ ಮೇಲೆ ಕರ, ಆದಾಯ ಪಟ್ಟಿ, ಮತ್ತು ಒಕ್ಕೂಟ ಸರಕಾರದಿಂದ ಹಾಕಲ್ಪಡುವ ವಿಮಾ ಪಾಲಿಸಿ, ಚೆಕ್ಕು ಮೊದಲಾ ದವುಗಳ ಚೀಟಿಯ ಕರ, ಅಮಲು ಪದಾರ್ಥಗಳಿಂದಾಗುವ ಔಷಧಿ ಮೊದ ಲಾದವುಗಳ ಹಾಗೂ ಸುಗಂಧ ರಸಾಯನಗಳ ಮೇಲೆ ಕರ, ಮತ್ತು ಒಕ್ಕೂಟ ಸರಕಾರದಿಂದ ವಸೂಲಾಗುವ ಆಸ್ತಿಯ ಮೇಲಿನ ತೆರಿಗೆ, ಟರ್ಮಿನಲ್ ಕರ, ಉಗಿಬಂಡಿ, ವರ್ತಮಾನ ಪತ್ರ ಹಾಗೂ ಜಾಹೀರಾತು ಪ್ರಕಟನೆಗಳ ಮೇಲಿನ ಮತ್ತು ಮನರಂಜನಗಳ ಮೇಲಿನ ಕರಗಳು ಹೀಗೆ ಎಲ್ಲ ವಿಧದಿಂದ ಒಟ್ಟಾಗುವ ಹಣವು ಆದಾಯವೆನಿಸುವುದು. ವರ್ಷಕ್ಕೆ ಸಮಾರು ೩೪೦ ಕೋಟಿ ರೂಪಾಯಿ ಅಂದಾಜು ಆದಾಯ ವಿರುವುದು.

**ವ್ಯಯ:-** ದಿವಾಣೀ ಕೆಲಸಗಳಿಗೆ, ಸಂರಕ್ಷಣೆಗೆ, ನಾಣ್ಯ ಚಲಾ ವಣೆ ಬಗ್ಗೆ, ಭೂಕಂದಾಯ ಒಕ್ಕಲತನ ಸುಧಾರಣೆ, ಶಿಕ್ಷಣ; ಆರೋಗ್ಯ, ಲೋಕಹಿತ ಕಾರ್ಯಗಳಿಗೆ; ನೀರಾವರಿಗಳಬಗ್ಗೆ, ದೇಶದಲ್ಲಾಗುವ ಆಕಸ್ಮಾತ್ ಕಠಿಣ ಪರಿಸ್ಥಿತಿಗಳಿಗೆ, ಕೊರತೆಗಳನ್ನು ಪೂರೈಸುವ ಬಗ್ಗೆ, ಸಾಲದ ಸಂಬಂಧ ಹೀಗೆ ಅನೇಕ ವಿಧವಲ್ಲಿ ಖರ್ಚುಗಳಿವೆ. ವರ್ಷಕ್ಕೆ ಸುಮಾರು ೩೩೭ ಕೋಟಿ ರೂ ವ್ಯಯವಿದೆ.

**68. What are the sources of income and heads of expenditure of a State. ಘಟಕ ಸಂಸ್ಥಾನದ ಆದಾಯ ವ್ಯಯಗಳಾವವು?**

**ಆಧಾಯ:-** ಗಣಿಗಳ, ಕಟ್ಟಡಗಳ, ವ್ಯಾಪಾರದ, ವಿದ್ಯುತ್ತಿನ, ವಾ  ಗಳ ಮೇಲಿನ ಕರಗಳು. ಒಕ್ಕಲತನ, ಭೂಕಂದಾಯ, ಸರಕುಗಳ

ಸುಂಕ, ಜಾಹೀರಾತಿನಕರ, ಪ್ರಯಾಣಿಕರ ಮೇಲಿನ ಕರ, ಮನರಂಜನಾ ಗೃಹಗಳಕರ, ಆಧಾಯ ಕರ, ಚೀಟಿ ವ್ಯವಹಾರ ಕರ, ಕೇಂದ್ರವು ಕೊಡುವ ಗ್ರ್ಯಾಂಟಹಣ, ವೊದಲಾದವುಗಳೆಲ್ಲ ಘಟಕ ಸಂಸ್ಥಾನದ ಆದಾಯ ಹಣವು. ವರ್ಷಕ್ಕೆ ಸುಮಾರು ೬೩ ಕೋಟಿ ರೂಪಾಯಿಯಷ್ಟು ಅಂದಾಜು ಆದಾಯ ವಿದೆ.

**ವ್ಯಯ**:- ಸಾಲ ತೀರಿಸುವುದು, ಸಂರಕ್ಷಣೆ, ವಿವಿಧ ಲೋಕೋಪ ಯೋಗಿ ಕಾರ್ಯಗಳ ಹಾಗೂ ಖಾತೆಗಳ ವೆಚ್ಚ, ಒಕ್ಕಲತನ, ಶಿಕ್ಷಣ, ಪರಿ ಸ್ಥಿತಿಗಳ ಸುಧಾರಣೆಗೆ ವೆಚ್ಚ ಇತ್ಯಾದಿಗಳು. ವರ್ಷಕ್ಕೆ ಸುಮಾರು ೬೦ರಿಂದ ೬೨ ಕೋಟಿ ರೂಪಾಯಿ ವ್ಯಯವಿದೆ.

## 69. Write a note on " Funds of India "
**ಭಾರತದ ವಿವಿಧ ನಿಧಿಗಳ ಕುರಿತು ಟಿಪ್ಪಣಿ ಬರೆಯಿರಿ.**

**ಭಾರತೀಯ ಸಂಕಲಿತ ನಿಧಿ**:- (Consolidated fund of India) ಒಕ್ಕೂಟ ಸರಕಾರವು ಸಾಲವಾಗಿ ಎತ್ತಿದ ನಿಧಿ, ಆದಾಯದಿಂದ ಬಂದ ನಿಧಿ, ಸಾಲ ಕೊಡುವುದರಿಂದ ಬರುವ ನಿಧಿ ಇತರ ಆಯನಿಧಿಗಳನ್ನು ಸಂಕಲನ ಮಾಡ.ವುದೇ ಭಾರತಿಯ ಸಂಕಲಿತ ನಿಧಿಯಾಗುತ್ತದೆ. ಸಂಸ್ಥಾನ ಗಳಲ್ಲಿ ಇದೇ ನಿಧಿಗೆ **ಸಂಸ್ಥಾನೀ ಸಂಕಲಿತ ನಿಧಿ** ( Consolidated Fund of the State ) ಎಂದೂ ಒಕ್ಕೂಟ ಸರಕಾರಕ್ಕಿರುವ ಇನ್ನಿತರ ಪ್ರತ್ಯೇಕ ಆದಾಯಗಳನ್ನು **ಭಾರತದ ಸರ್ವಜನಿಕ ಪತ್ರ** ( Public account of India ) ಮತ್ತು ಸಂಸ್ಥಾನದ ಆದೇ ಆದಾಯಗಳನ್ನು ( Public account of the State ) **ಸಂಸ್ಥಾನೀ ಸಾರ್ವಜನಿಕ ಪತ್ರ** ಗಳಲ್ಲೂಜಮೆ ಮಾಡುವರು. ಇವು ಭಾರತದ ವಿವಿಧ ನಿಧಿಗಳು. ಈ ಸಂಕಲಿತ ಹಣವನ್ನು ಕಾಯ್ದೆ ಪ್ರಕಾರವಾಗಿ ವ್ಯಯ ಮಾಡಲಾಗುವುದು. ಮೊದಲೇ ಆದರ ಬಜೆಟ್ ತಯಾರಾಗಿ ಶಾಸನ ಸಭೆಯಲ್ಲಿ ಪಾಸಾಗುತ್ತದೆ.

## 70. Describe how civil and criminal Justice administered in India? **ಭಾರತದಲ್ಲಿನ ದಿವಾಣಿ ಮತ್ತು ಫೌಜದಾರಿ ನ್ಯಾಯ ವ್ಯವಹಾರವನ್ನು ವಿವರಿಸಿರಿ.**

ನ್ಯಾಯ ಸಭೆಯು ಕಾರ್ಯಕಾರಿ ಹಾಗೂ ಕಾರ್ಯವಿಧಾಯಕ ಸಭೆಗಳಿಂದ ಪ್ರತ್ಯೇಕವಿದ್ದು ಸ್ವತಂತ್ರವಾಗಿ ತನ್ನ ಕರ್ತವ್ಯ ನೆರವೇರಿಸುತ್ತದೆ.

**ಕರ್ತವ್ಯಗಳು:–** ನಾಗರಿಕನ ಹಕ್ಕು ರಕ್ಷಿಸಿ ನ್ಯಾಯವನ್ನು ನಿಷ್ಪಕ್ಷಪಾತದಿಂದ ತೀರಿಸುವುದು. ಕಾಯ್ದೆಗಳ ಸಹಾಯದಿಂದ ನ್ಯಾಯಾನ್ಯಾಯ, ಶಿಕ್ಷೆಗಳನ್ನು ಗೊತ್ತುಮಾಡುವುದು, ಕಾಯ್ದೆಗಳ ವಿವರಣೆ ಮಾಡುವುದು ಇತ್ಯಾದಿ.

**ನ್ಯಾಯದಾನ:–** ೧) ಆಸ್ತಿಯ ಹಾಗೂ ಸಂಪತ್ತಿನ ಸಂಬಂಧದ ಹಕ್ಕುಗಳ ನ್ಯಾಯಗಳನ್ನು ದಿವಾಣಿ ಕೋರ್ಟ ವಿಚಾರಿಸುವುದು. ೨) ಜೀವನಕ್ಕಾಗಲಿ ಸಂಪತ್ತಿಗಾಗಲಿ ಕೇಡು ಬರುವಂತಹ ನ್ಯಾಯಗಳನ್ನು ಫೌಜದಾರಿ ಕೋರ್ಟು ತೀರ್ಮಾನಿಸುತ್ತದೆ. ಎರಡೂ ನ್ಯಾಯಕ್ಕೆ ಬೇರೆ ಬೇರೆ ನ್ಯಾಯಾಲಯಗಳಿವೆ.

**ಅಪರಾಧ ಶಿಕ್ಷೆ:–** ದಿವಾಣಿ ನ್ಯಾಯದಲ್ಲಿ ದೇಹ ದಂಡನೆ ಶಿಕ್ಷೆ ಇರದು. ದಂಡ ತೆರುವ ಇಲ್ಲವೆ ಕರಾರುಗಳ ಮೇಲಿನಿಂದ ಒಡಂಬಡುವ ಶಿಕ್ಷೆಗಳಷ್ಟೆ ಇರುತ್ತವೆ. ಆದರೆ ಫೌಜದಾರಿ ನ್ಯಾಯದಲ್ಲಿ ದೇಹ ದಂಡನೆ, ದಂಡ, ಮೊದಲಾದ ಶಿಕ್ಷೆಗಳೂ ದೊರೆಯಬಹುದು.

**ಭಾರತದಲ್ಲಿನ ವಿವಿಧ ದಿವಾಣಿ ಹಾಗೂ ಫೌಜದಾರಿ ನ್ಯಾಯಾಲಯಗಳು:–** ( The Various grades of Civil & Criminal Courts in India )

**೧. ವರಿಷ್ಠ ನ್ಯಾಯಾಲಯ:–** ( Supreme Court ) ಇದು ಭಾರತದಲ್ಲಿನ ಎಲ್ಲಕ್ಕೂ ಮೇಲಿನ ನ್ಯಾಯಾಲಯ ಇದರ ವಿರುದ್ಧ ಅಪೀಲು ಇರುವುದಿಲ್ಲ. ಇದರಲ್ಲಿ ಮುಖ್ಯ ನ್ಯಾಯಾಧೀಶನನ್ನೊಳಗೊಂಡು ಏಳು ಜನ ನ್ಯಾಯಾಧೀಶರಿರುವರು. ಇವರು ಭಾರತದ ಹೈಕೋರ್ಟನಲ್ಲಿ ೫ ವರ್ಷವಾದರೂ ಕೆಲಸ ಮಾಡಿದ ನ್ಯಾಯಾಧೀಶರೋ, ೧೦ ವರ್ಷ ಕೆಲಸ ಮಾಡಿದ ವಕೀಲರೋ, ಜೂರರೊ ಆಗಿದ್ದು ಭಾರತದ ನಾಗರಿಕರಿರಬೇಕು. ಇವರನ್ನು ಅಧ್ಯಕ್ಷನು ನೇಮಿಸುತ್ತಾನೆ. ಅಧಿಕಾರದವಧಿ ೬೫ ವರ್ಷ. ಅದರೊಳಗೆ ಪಾರ್ಲಿಮೆಂಟು ಅವರು ಅಯೋಗ್ಯರೆಂದು ಕಾರಣ ಕೊಟ್ಟರೆ

ಅಧ್ಯಕ್ಷನು ತಳ್ಳಬಹುದು. ಇಲ್ಲವೆ ಅವರಾಗಿಯೆ ರಾಜಿನಾಮೆ ಕೊಡ ಬಹುದು. ಆದರೆ ನಿವೃತ್ತರಾದಮೇಲೆ ಭಾರತದ ಯಾವುದೇ ನ್ಯಾಯಾಲಯದಲ್ಲಿ ಕೆಲಸ ಮಾಡಬಾರದು ಮುಖ್ಯ ನ್ಯಾಯಾಧೀಶನಿಗೆ ರೂ ೫೦೦೦ ಹಾಗೂ ಸಹ ನ್ಯಾಯಾಧೀಶರಿಗೆ ರೂ ೪೦೦೦ ವೇತನ ದೊರೆಯುವುದು.

ದಿವಾಣಿ ನ್ಯಾಯಕ್ಕೆ ಅಪೀಲುಗಳು ಇದರ ಮುಂದೆ ಬರಬೇಕಾದರೆ ಹೈಕೋರ್ಟು ಹಾಗೆ ಸಮ್ಮತಿಸಬೇಕು, ಇಲ್ಲವಾದರೆ ವ್ಯಾಜ್ಯದ ಮೌಲ್ಯ ಇಪ್ಪತ್ತು ಸಾವಿರಕ್ಕೆ ಮೀರಿರಬೇಕು. ಆದರೆ ಫೌಜದಾರಿ ವ್ಯಾಜ್ಯದಲ್ಲಿ—ಸಹನ್ಯಾಯಾಲಯದಲ್ಲಿ ಬಿಡಲ್ಪಟ್ಟ ವ್ಯಕ್ತಿಗೆ ಹೈಕೋರ್ಟು ದೇಹಾಂತ ಶಿಕ್ಷೆ ವಿಧಿಸಿದರೆ, ವರಿಷ್ಠ ನ್ಯಾಯಾಲಯವೇ ತೀರ್ಮಾನಿಸಬೇಕೆಂದು ಹೈಕೋರ್ಟು ಹೇಳಿದರೆ ಅಥವಾ ಕೆಳಗಿನ ನ್ಯಾಯಾಲಯಗಳಲ್ಲಿನ ವ್ಯಾಜ್ಯಗಳನ್ನು ತಾನು ವಿಚಾರಿಸಿ ಅಪರಾಧಿಗೆ ಶಿಕ್ಷೆ ಕೊಟ್ಟರೆ ವರಿಷ್ಠ ನ್ಯಾಯಾಲಯದೆದುರು ಆ ವ್ಯಾಜ್ಯ ಬರಬಹುದು.

ಇದು ಮೂಲ ಹಾಗೂ ಅಪೀಲ ವ್ಯಾಜ್ಯಗಳನ್ನು ತೀರ್ಮಾನಿಸ ಬಹುದು. ಕೆಳ ನ್ಯಾಯಾಲಯಗಳ ಕಾರ್ಯಭಾರವನ್ನು ಹೇಳುವ ಅಧಿಕಾರವೂ ಇದೆ (ಅಧ್ಯಕ್ಷನ ಅನುಮತಿ ಬೇಕು) ಮತ್ತು ರಾಜ್ಯಘಟನೆಯ ಅರ್ಥವನ್ನು ವಿವರಿಸುವುದು. ಘಟಕಗಳ ನಡುವೆ ಮತ್ತು ಕೇಂದ್ರ—ಹಾಗೂ ಘಟಕಗಳೊಡನೆ ಹುಟ್ಟುವ ಮತಭೇದ—ನ್ಯಾಯಗಳನ್ನು ತೀರಿಸುತ್ತದೆ. ವಿವಿಧ ಸಂಸ್ಥಾನಗಳ ಹೈಕೋರ್ಟುಗಳ ತೀರ್ಮಾನದ ಮೇಲೆ ಮಾಡಲಾದ ಅಪೀಲುಗಳನ್ನು ಸ್ವೀಕರಿಸಿ ಕೊನೆಯ ನಿರ್ಣಯವನ್ನು ಹೇಳುತ್ತದೆ. ಹೀಗೆ ಇದರ ತೀರ್ಪು ಎಲ್ಲ ನ್ಯಾಯಾಲಯಗಳೂ ಒಪ್ಪಲೇ ಬೇಕು.

**೨. ಉಚ್ಚನ್ಯಾಯಾಲಯ:–** (High Court) ಒಂದು ಸಂಸ್ಥಾನದಲ್ಲಿನ ಎಲ್ಲಕ್ಕೂ ಮೇಲಿನ ನ್ಯಾಯಾಲಯವಿದು. ಇದರಲ್ಲಿ ಒಬ್ಬ ಮುಖ್ಯ ನ್ಯಾಯಾದೀಶನನ್ನೊಳಗೊಂಡು ೧೫ರಿಂದ ೨೦ರ ವರೆಗೆ ಸಹ ನ್ಯಾಯಾದೀಶರಿರುತ್ತಾರೆ. ಇವರನ್ನು ಅಧ್ಯಕ್ಷನು ವರಿಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾದೀಶ ಹಾಗೂ ಸಂಸ್ಥಾನದ ರಾಜಪ್ರಮುಖ ಇಲ್ಲವೆ ಗವರ್ನರರ ಅಭಿಪ್ರಾಯದಂತೆ ಆರಿಸುವನು. ಇವರು ಭಾರತದ ನಾಗರಿಕರೂ ಭಾರ

ತದ ಯಾವುದೇ ನ್ಯಾಯಾಲಯದಲ್ಲಿ ಹತ್ತು ವರ್ಷ ಕೆಲಸ ಮಾಡಿದವರು ಇಲ್ಲವೆ ಹೈಕೋರ್ಟಿನಲ್ಲಿ ಹತ್ತು ವರ್ಷ ಕೆಲಸ ಮಾಡಿದ ವಕೀಲರೂ ಆಗಿರ ಬೇಕು. ಅಧಿಕಾರವಧಿ ೬೦ ವರ್ಷ, ಅದರೊಳಗೆ ಇವರು ಪದವಿಯನ್ನು ಕಳಕೊಳ್ಳಬಹುದು. ಇದರ ಮುಖ್ಯ ನ್ಯಾಯಾಧೀಶನಿಗೆ ರೂ. ೪೦೦೦ ಹಾಗೂ ಸಹ ನ್ಯಾಯಾಧೀಶರಿಗೆ ರೂ. ೩೫೦೦ ವೇತನವಿದೆ. ಇವರು ನಿವೃತ್ತರಾದ ಮೇಲೆ ಯಾವುದೇ ನ್ಯಾಯಾಲಯಕ್ಕೆ ಸೇರಲುಬಾರದು. ದಿವಾಣೀ ಹಾಗೂ ಫೌಜದಾರಿ ನ್ಯಾಯಗಳ ಅಪೀಲುಗಳನ್ನು ಸ್ವೀಕರಿಸಿ ತೀರ್ಪು ಕೊಡುವುದೂ, ಕಾಯ್ದೆಯ ಅರ್ಥ ವಿವರಿಸಿ ಕೆಳ ನ್ಯಾಯಾಲಯಗಳಿಗೆ ಸಲಹೆ ಕೊಡುವುದೂ, ಅವುಗಳ ಮೇಲ್ವಿಚಾರಣೆ ಮಾಡಿ ಕಾರಭಾರದ ನಿಯಮಾವಳಿ ಕೊಡುವುದೂ ಕೆಳ ಕೋರ್ಟುಗಳಲ್ಲಿನ ವ್ಯಾಜ್ಯಗಳನ್ನು ತಾನು ತರಿಸಿಕೊಂಡು ವಿಮರ್ಶಿಸುವುದೂ ಮತ್ತು ನ್ಯಾಯಾಲಯದ ಬೇರೆ ಅಧಿಕಾರಿ ಗಳನ್ನು ನೇಮಿಸುವುದೂ ಇದರ ಕರ್ತವ್ಯಗಳಾಗಿವೆ.

೩. ಜಿಲ್ಲಾ ನ್ಯಾಯಾಲಯ :- ( District Court ) (ಅ) ಜಿಲ್ಲೆಗೊಂದರಂತೆ ಈ ನ್ಯಾಯಾಲಯಗಳಿದ್ದು ಒಬ್ಬೊಬ್ಬ ಜಿಲ್ಲಾ ನ್ಯಾಯಾ ಧೀಶನಿರುತ್ತಾನೆ. ಹೈಕೋರ್ಟಿನ ಸಲಹೆಯಂತೆ ಜಿಲ್ಲಾ ನ್ಯಾಯಾಧೀಶನ ಮೇಲಧಿಕಾರ ಗವರ್ನರ ಇಲ್ಲವೆ ರಾಜ ಪ್ರಮುಖರ ಕೈಯಲ್ಲಿರುವುದು. ಈ ಪದವಿಗೆ ಬರುವವನು ೭ ವರ್ಷದಷ್ಟಾದರೂ ವಕೀಲನಾಗಿ ಕೆಲಸ ಮಾಡಿರ ಬೇಕು. ಅವನಿಗೆ ಹೆಚ್ಚು ಕೆಲಸ ಬಿದ್ದರೆ ಅವನ ಸಹಾಯಕ್ಕೆಂದು— "ಸಂಯುಕ್ತ ನ್ಯಾಯಾಧಿಪತಿ" ( Joint Judge ) ಮತ್ತು ಐಚ್ಛಿಕ ನ್ಯಾಯಾಧೀಶ ( Additional Judge ) ಗಳ ನೇಮಕ ವಾಗುವುದು. ಇದು ದೊಡ್ಡ ಆಸ್ತಿಗಳ ವ್ಯಾಜ್ಯ, ದಿವಾಣಿ ನ್ಯಾಯಾಧೀಶರ ವಿರುದ್ಧ ಅಪೀಲುಗಳನ್ನು, ಮ್ಯಾಜಿಸ್ಟ್ರೇಟರು ಮೇಲ್ಕಳಿಸಿದ ಅಥವಾ ಅವರ ವಿರುದ್ಧ ಮಾಡಿದ ಫೌಜದಾರಿ ಅಪೀಲುಗಳನ್ನು ವಿಚಾರಿಸಿ, ತೀರ್ಪು ಕೊಡು ವುದು. ಅಪರಾಧಿಗಳಿಗೆ ದಂಡಹಾಕುವ ಶಿಕ್ಷಿಸುವ ಇಲ್ಲವೆ ಹ್ಯಾಕೋರ್ಟಿನ ಅಪ್ಪಣೆ ಪಡೆದು ಮರಣದಂಡನೆ ಕೊಡುತ್ತದೆ. ಇದರ ನ್ಯಾಯಾಧೀಶನೆ ಸೆಸೆನ್ಸ್‌ಜಜ್‌ನಾಗಿ ಕೆಲಸ ಮಾಡುವನು.

**ಜಿಲ್ಲಾ ನ್ಯಾಯಾಲಯ :–** (ಬ) ಜಿಲ್ಲಾ ನ್ಯಾಯಾಧಿಪತಿಯ ಕೆಳಗೆ ೧ನೇ ಮತ್ತು ೨ನೇ ತರಗತಿ ಸಹ ನ್ಯಾಯಾಧೀಶರಿರುವರು. ಇವರಿಗೆ **ಹಿರಿ ಮತ್ತು ಕಿರಿಯ ವಿಭಾಗದ** ( Senior and Junior Division ) **ದಿವಾಣೀ ನ್ಯಾಯಾಧೀಶ** ರೆನ್ನುವರು. ಇವರನ್ನು ರಾಜ ಪ್ರಮುಖ ಇಲ್ಲವೆ ಗವರ್ನರರು ಲೋಕಸೇವಾ ಸಮಿತಿ ಹಾಗೂ ಹೈಕೋರ್ಟ ಗಳ ಅಭಿಪ್ರಾಯದಿಂದ ನೇಮಿಸುತ್ತಾರೆ. ಹಿರಿಭಾಗದ ನ್ಯಾಯಾಧೀಶರು ಎಷ್ಟೇ ಮೌಲ್ಯದ ವ್ಯಾಜ್ಯಗಳನ್ನು ತೀರಿಸಬಹುದಾದರೂ ಕಿರಿಭಾಗದ ನ್ಯಾಯಾಧೀಶನಿಗೆ ರೂ. ೧೦,೦೦೦ ದ ಒಳಗಿನ ವ್ಯಾಜ್ಯಗಳನ್ನು ಮಾತ್ರ ತೀರ್ಮಾನಿಸಲು ಹಕ್ಕಿದೆ.

**೪. ಪಟ್ಟಣದ ದಿವಾಣಿ ನ್ಯಾಯಾಲಯ :–** (Town Civil Court) ಸ್ಥಳೀಯ ಜನರಿಗೆ ಬೇಗನೆ ನ್ಯಾಯ ತೀರ್ಮಾನ ಮಾಡಿ ಕೊಳ್ಳಲು, ಅವಸರದ, ಪ್ರಾಸಂಗಿಕ ಘಟನೆಗಳನ್ನು ಹಿಡಿತವಲ್ಲಿರಿಸಲು ಈ ನ್ಯಾಯಾಲಯಗಳಿವೆ ಇದು ೧೦,೦೦೦ ರೂಪಾಯಿಗಳ ವರೆಗಿನ ವ್ಯಾಜ್ಯ ಗಳನ್ನು ತೀರ್ಮಾನಿಸಬಹುದು. ಇದರ ತೀರ್ಪಿನ ವಿರುದ್ಧ ಅಪೀಲು ಮಾಡಿ ಕೊಳ್ಳುವದಾದರೆ ಹೈಕೋರ್ಟಿಗೆ ಹೋಗಬೇಕು. ಇದರ ಸಹಾಯದಿಂದಾಗಿ ಹೈಕೋರ್ಟಿಗೆ ಕೆಲಸಗಳು ಸ್ವಲ್ಪ ಕಡಿಮೆ ಯಾಗುತ್ತವೆ.

**೫. ನಗರ ಫೌಜದಾರಿ ನ್ಯಾಯಾಲಯ :–** ( Town Criminal Court ) ಇದೂ ಹೈಕೋರ್ಟಿನ ಸಹಕಾರಿ ನ್ಯಾಯಾಲಯ. ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರ ತೀರ್ಪಿನ ವಿರುದ್ಧ ಕೇಳಲಾದ ಅಪೀಲುಗಳನ್ನು ವಿವರಿಸವುದು.

**೬. ಸಣ್ಣ ಸಮಸ್ಯೆಗಳ ನ್ಯಾಯಾಲಯಗಳು :–** ( Small causes court ) ಅಲ್ಲಲ್ಲಿನ ನಗರಗಳಲ್ಲಿ ಸಣ್ಣಕಾರಣಗಳಿಗಾದ ವಾದ ವಿವಾದ, ಚಿಕ್ಕ ಮೌಲ್ಯದ ಆಸ್ತಿಗಳ ಕುರಿತು ವ್ಯಾಜ್ಯ ಮೊದಲಾದವುಗಳನ್ನು ತೀರ್ಮಾನಿಸುವಸಲುವಾಗಿ ಈ ನ್ಯಾಯಾಲಯಗಳಿದ್ದು ಇವುಗಳ ತೀರ್ಪಿನ ವಿರುದ್ಧ ಅಪೀಲು ಇರುವುದಿಲ್ಲ.

**೭. ಜಮಾಬಂದಿ ನ್ಯಾಯಸ್ಥಾನ :–** ( Revenue Court ) ಜಮಾಬಂದಿ–ಕಂದಾಯಗಳ ಕುರಿತಾದ ವ್ಯಾಜ್ಯಗಳನ್ನು ಪರಿಹರಿಸಲು

ಪ್ರತ್ಯೇಕ ನ್ಯಾಯಾಲಯಗಳಿದ್ದು ಜಿಲ್ಲೆಯ ಕಲೇಕ್ಟರರೇ ಇದರ ಮುಖ್ಯ ನ್ಯಾಯಾಧೀಶರಾಗಿ ಕೆಲಸ ಮಾಡುವರು,

೮. ಸಿಪಾಯೀ ನ್ಯಾಯಾಲಯ:- ( Military Court ) ಇದರಲ್ಲಿ ದೇಶೀ ಸೈನಿಕರ ಹಾಗೂ ಸೇನಾಪತಿಗಳಿಗೆ ಸಂಬಂಧಿಸಿದ ವ್ಯಾಜ್ಯಗಳು ತೀರ್ಮಾನವಾಗುವುವು.

೯. ನ್ಯಾಯಾಧ್ಯಕ್ಷರ ನ್ಯಾಯಾಲಯ :- ( Magistrate court ) ಇದರ ನ್ಯಾಯಾಧ್ಯಕ್ಷರಲ್ಲಿ ೧, ೨ ಮತ್ತು ೩ನೇ ತರಗತಿಗಳಿವೆ. ೧ನೇ ತರಗತಿ ನ್ಯಾಯಾಧ್ಯಕ್ಷನು ಒಂದು ಸಾವಿರ ರೂಪಾಯಿ ದಂಡ ಎರಡು ವರ್ಷ ಶಿಕ್ಷೆಯನ್ನು ೨ನೇ ತರಗತಿಯವನು ಎರಡುನೂರು ರೂಪಾಯಿ ದಂಡ ಆರು ತಿಂಗಳ ಶಿಕ್ಷೆಯನ್ನು, ೩ನೇ ತರಗತಿಯವನು ಐವತ್ತು ರೂಪಾಯಿ ದಂಡ ಒಂದು ತಿಂಗಳ ಶಿಕ್ಷೆಯನ್ನು ವಿಧಿಸಲು ಅಧಿಕಾರವುಳ್ಳವರಿದ್ದಾರೆ. ಜಿಲ್ಲಾ ಕಲೆಕ್ಟರನು ಜಿಲ್ಲಾ ನ್ಯಾಯಾಧ್ಯಕ್ಷನಾಗಿರುತ್ತಾನೆ. ( District Magistrate ) ಮತ್ತು ದೊಡ್ಡ ಪಟ್ಟಣಗಳಲ್ಲಿ ನಗರ ನ್ಯಾಯಾಧ್ಯಕ್ಷ City Magistrate ) ಗಳಿರುತ್ತಾರೆ.

೧೦. ಬೆಂಚ್ ನ್ಯಾಯಾಲಯ:- ( Bench Magistrate ) ಇದರ ನ್ಯಾಯಾಧ್ಯಕ್ಷರುಗಳಿಗೂ ಸದಸ್ಯರಿಗೂ ವೇತನವಿರದೆ ಗೌರವತನವಾಗಿ ದುಡಿಯುತ್ತಾರೆ. ಇವರಲ್ಲೂ ವೇತನ ನ್ಯಾಯಾಧ್ಯಕ್ಷರಂತೆ ಮೂರು ತರಗತಿಗಳಿದ್ದು ಅಧಿಕಾರಗಳೂ ಅವರಂತೆಯೆ ಇದ್ದರೂ ನ್ಯಾಯಾಲಯದಲ್ಲಿ ಇವರು ಬೆಂಚುಗಳ ಮೇಲೆ ಕೂಡುತ್ತಾರೆ. ಅಮುಖ್ಯವಾದ ವ್ಯಾಜ್ಯಗಳು ಇವರ ಮುಂದೆ ತೀರ್ಪಿಗೆ ಬರುತ್ತವೆ.

ಇಷ್ಟೇ ಅಲ್ಲದೆ ಮೈನರ್ ಕೋರ್ಟುಗಳು ( Courts of words ) ಹಳ್ಳಿ ಹಳ್ಳಿಗಳಲ್ಲಿ ಗ್ರಾಮ ಚಾವಡಿ, ಪಂಚಾಯತ ಸಭೆ ಮೊದಲಾದವುಗಳೂ ನ್ಯಾಯಶಾಖೆಯಲ್ಲಿ ಸಹಕಾರ ಮಾಡಿ ಜನರಿಗೆ ಯೋಗ್ಯ ನ್ಯಾಯ ಸಿಗುವಂತೆ ದುಡಿಯುತ್ತವೆ.

**71. Write short notes on 1) Appeal Courts. 2) Seperation of Judiciary. 3) Reserve**

Bank of India. 4) Impeachment. 5) Inter state Council. ಟಿಪ್ಪಣಿ ಬರೆಯಿರಿ.

೧. ಮೇಲ್ಕೇಳಿಕೆ ನ್ಯಾಯಾಲಯ:- ಯಾವುದೇ ವ್ಯಾಜ್ಯವನ್ನು ಮೊದಲು ತೀರ್ಮಾನಕ್ಕೆ ಹಿಡಿಯುವ ನ್ಯಾಯಾಲಯವು ಮೂಲ ನ್ಯಾಯಾಲಯವು. ಇದು ಕೊಡುವ ತೀರ್ಪಿನ ವಿರುದ್ಧ ತಕರಾರುಗಳಿದ್ದರೆ ವ್ಯಾಜ್ಯಗಾರರು ಅದಕ್ಕಿಂತ ಮೇಲಿನ ನ್ಯಾಯಾಲಯಕ್ಕೆ ಅರಿಕೆ ಮಾಡಿಕೊಳ್ಳುತ್ತಾರೆ. ಅಲ್ಲಿಯೂ ತಕರಾರು ಉಳಿದರೆ ಅದಕ್ಕಿಂತ ಮೇಲೆ ವ್ಯಾಜ್ಯವು ಅಪೀಲಾಗುತ್ತದೆ. ಹೀಗೆ ಯಾವ ನ್ಯಾಯಾಲಯವು ಸರಿಯಾದ ವಿಮರ್ಶೆಯೊಂದಿಗೆ ಯೋಗ್ಯ ತೀರ್ಪು ಕೊಡುತ್ತದೋ ಅದೇ ಮೇಲ್ಕೇಳಿಕೆ ನ್ಯಾಯಾಲಯ (ಅಪೀಲು ಕೋರ್ಟ್) ಎನಿಸುವುದು.

೨. ನ್ಯಾಯ ಶಾಖೆಯ ಪ್ರತ್ಯೇಕರಣ:- ಒಂದೊಂದು ವಿಭಾಗಕ್ಕೆ ಒಂದೊಂದು ಮನೋವೃತ್ತಿಯ ಹಾಗೂ ಆಯಾ ವಿಭಾಗಗಳಲ್ಲಿ ಹೆಚ್ಚಿನ ಜ್ಞಾನಗಳಿಸಿದ ಅಧಿಕಾರಿಗಳು ಬೇಕು. ಇಲ್ಲವಾದರೆ ಎಲ್ಲ ಶಾಖೆಗಳ ನೀತಿಯನ್ನು ಒಬ್ಬನೇ ಕಲಿಯುವುದೂ ಅಸಾಧ್ಯ. ಅದರಂತೆ ವರ್ತಿಸುವುದೂ ಅಸಂಭವ. ಜಿಲ್ಲೆಯ ಶಾಂತಿ ವ್ಯವಸ್ಥೆ ರಕ್ಷಣೆಗಳಿಗೂ ಕುಂದಾಗಬಹುದು. ( See Ans. 44—3. ) ಆದ್ದರಿಂದ ನ್ಯಾಯಶಾಖೆಯನ್ನು ಬೇರೆ ಶಾಖೆಗಳಿಂದ ಬೇರ್ಪಡಿಸುವುದು ಒಳ್ಳೆಯದು. ಅದರಿಂದ ದೇಶದ ನ್ಯಾಯ ದಾನವು ಸರಳವಾಗುವುದು.

೩. ಭಾರತದ ನಿಧಿ ಕಾದಿರಿಸುವ ಸಂಸ್ಥೆ :- ಭಾರತದಲ್ಲಿನ ಎಲ್ಲ ಬ್ಯಾಂಕುಗಳಿಂದಲೂ ವಿಶಿಷ್ಟ ಪ್ರಮಾಣದಿಂದ ನಿಧಿಗಳನ್ನು ತೆಗೆದುಕೊಂಡು ತನ್ನಲ್ಲಿ ಕಾದಿರಿಸುತ್ತದೆ. ಹಾಗೂ ಆ ಸಂಸ್ಥೆಗಳು ಸಾಲ ಬೇಡಿದಾಗ ಕೊಡುತ್ತದೆ. ಭವಿಷ್ಯತ್ ಭದ್ರತೆಗೆಂದೇ ಎಲ್ಲ ಆರ್ಥಿಕ ಸಂಸ್ಥೆಗಳು ಇದರೊಂದಿಗೆ ಸಂಬಂಧ ಬೆಳೆಸಿರುತ್ತವೆ. ಇದು ಸರಕಾರಿ ಸಂಸ್ಥೆಯಿದ್ದು ನೋಟುಗಳ ಚಲಾವಣೆಯನ್ನು ಮಾಡುತ್ತದೆ. ಒಬ್ಬ ವಿಮರ್ಶಕರು "It is a Bankers Bank" ಎಂದಿರುವರು.

೪. ಅಕ್ಷೇಪ ವಿಚಾರಣೆ:- ರಾಷ್ಟ್ರಾಧ್ಯಕ್ಷನು ನಿರ್ದಿಷ್ಟ ರಾಜ್ಯಘಟನೆಯ ತತ್ವಗಳಂತೆ ವರ್ತಿಸದಿದ್ದಲ್ಲಿ ಪಾರ್ಲಿಮೆಂಟಿಗೆ ಅಧ್ಯಕ್ಷನ ನೀತಿ

ಸರಿಗಾಣದೆ ಹೋದಲ್ಲಿ ಅಧ್ಯಕ್ಷನನ್ನು ಪಾರ್ಲಿಮೆಂಟು ವಿಚಾರಣೆಗೆ ಗುರಿ ಮಾಡುವುದು. ಈ ವಿಚಾರಣೆಗೆ ಆಕ್ಷೇಪ ವಿಚಾರಣೆ ಎನ್ನುವರು. ವಿಚಾರಣೆ ಮುಗಿದು ಅಧ್ಯಕ್ಷನನ್ನು ಆಕ್ಷೇಪರ್ಹನೆಂದು ತೀರ್ಮಾನಿಸಿ ಪಾರ್ಲಿಮೆಂಟಿನ ಒಟ್ಟು ಸದಸ್ಯರ ಕ್ಷಿ ಕ್ಕಿಂತ ಹೆಚ್ಚು ಜನರು ಅವನನ್ನು ಅಧಿಕಾರದಿಂದ ತಳ್ಳಲು ಸೂಚಿಸಿದರೆ ಅಧ್ಯಕ್ಷನು ಅಧಿಕಾರದಿಂದ ತಳ್ಳಲ್ಪಡುವನು.

**೫. ಅಂತರ್ ಸಂಸ್ಥಾನಿ ಮಂಡಲಿ :–** ಒಂದು ಘಟಕ ಸಂಸ್ಥಾನದೊಡನೆ ಮತ್ತೊಂದು ಘಟಕ ಸಂಸ್ಥಾನಕ್ಕೂ, ರಾಜ ಪ್ರಮುಖ ಮತ್ತು ಗವರ್ನರರೊಡನೆಯೂ ಮತಭೇದ–ಜಗಳಾಟಗಳು ಹುಟ್ಟಿಕೊಂಡರೆ ಅವುಗಳನ್ನು ತೀರ್ಮಾನಿಸಲು ಈ ಮಂಡಲವು ಅಧ್ಯಕ್ಷನಿಂದ ನೇಮಿಸಲ್ಪಡುವುದು.

## 72. (A) Write what you know about the Administrative service commissions of India

**ಭಾರತದ ಸರಕಾರಿ ಸೇವಾ ಸಮಿತಿಗಳ ಕುರಿತು ನಿಮಗೆ ತಿಳಿದುದನ್ನು ಬರೆಯಿರಿ.**

ಈ ಸೇವಾ ಸಮಿತಿಗಳಿಂದಲೆ ದೇಶದೇಳಿಗೆ, ಕಾರ್ಯಭಾರ ಪ್ರಗತಿಗಳು ಆಧರಿಸಿವೆ. ರಾಜ್ಯಘಟನೆ ತತ್ವಗಳು ಒಳ್ಳೆಯವೇ ಇರುವುದೆಂದು ಹೇಳಲಾಗದು. ಆದರೂ ಅವನ್ನು ಕಾರ್ಯರೂಪಕ್ಕೆ ತರಲು ಹೆಣಗುವುದು ಈ ಸಮಿತಿಗಳೇ. ಆದ್ದರಿಂದ ಸೇವಾವರ್ಗಕ್ಕೆ ಸೇರುವವರ ಯೋಗ್ಯತೆ, ವ್ಯಕ್ತಿತತ್ವಗಳನ್ನು ಪರೀಕ್ಷಿಸಿಕೊಳ್ಳಬೇಕು.

ಈ ಸೇವಾ ಸಮಿತಿಯಲ್ಲಿ ಮೂರು ಮುಖ್ಯ ವಿಭಾಗಗಳಿವೆ.

**೧. ಅಖಿಲ ಭಾರತ ಸೇವಾವರ್ಗ :–** ( All India Service ) ಈ ಸಮಿತಿಯಲ್ಲಿನ ಸೇವಕರನ್ನು ವಿವಿಧ ಪರೀಕ್ಷೆಗಳನ್ನು ಮಾಡಿ, ಅವರಲ್ಲಿರಬೇಕಾದ ನಿರ್ದಿಷ್ಟ ಯೋಗ್ಯತೆಯನ್ನು ವಿಮರ್ಶಿಸಿ ನೌಕರಿಗೆ ತೆಗೆದುಕೊಳ್ಳುವುದು. ಇವರಿಗೆ ದೊಡ್ಡ ಅಧಿಕಾರವೂ ಹೆಚ್ಚು ವೇತನವೂ ದೊರೆಯುವುದು ಆದರೆ ಅವರಿಗೆ ಭಾರತದ ಯಾವುದೇ ಭಾಗಕ್ಕೆ ವರ್ಗವಾಗಬಹುದು. ಇವರ ಅಧಿಕಾರಿಗಳ ಕಾರ್ಯದಕ್ಷತೆಯೂ ಅಷ್ಟೆ ಮಹತ್ವದು.

೨. ಒಕ್ಕೂಟ ಸೇವಾವರ್ಗ :– ( Union Service Commission ) ಇದರಲ್ಲಿ ನಾಲ್ಕು ತರಗತಿಗಳಿದ್ದು ೧ ಮತ್ತು ೨ನೇ ತರಗತಿಯ ನೌಕರು ಲೋಕಸೇವಾ ಸಮಿತಿಯಿಂದ ಆರಿಸಲ್ಪಡುವರು, ಹಾಗೆಯೆ ೩ ಮತ್ತು ೪ನೇ ತರಗತಿ ನೌಕರರು ಅದರ ಅಧಿಕಾರಿಗಳಿಂದಲೇ ಆರಿಸಲ್ಪಡುವರು. ಇದರ ಸೇವಕರಿಗೂ ಭಾರತದ ಯಾವುದೇ ಪ್ರದೇಶಕ್ಕೆ ವರ್ಗವಾಗಬಹುದು.

೩. ಸಂಸ್ಥಾನ ಸೇವಾವರ್ಗ :– ( State Service Commission ) ಇದರ ಘಟನೆಯಾದರೂ ಒಕ್ಕೂಟ ಸೇವಾವರ್ಗದಂತೆಯೆ ಇರುವುದು. ಆದರೆ ಇದರ ಸೇವಕರಿಗೆ ಆಯಾ ಸಂಸ್ಥಾನಕ್ಕಿಂತ ಹೊರಭಾಗಕ್ಕೆ ವರ್ಗವಾಗದು. ಇದರಲ್ಲೂ ನಾಲ್ಕು ವಿಭಾಗಗಳಿವೆ. ೬೦ ವರ್ಷಕ್ಕೆ ಸದಸ್ಯರು ನಿವೃತ್ತರಾಗುವರು.

(B) Explain briefly the structure and duties, of the public service commission. **ಲೋಕ ಸೇವಾ ಸಮಿತಿಯ ರಚನೆ, ಕಾರ್ಯಭಾರಗಳನ್ನು ಸವಿಸ್ತಾರವಾಗಿ ವಿವರಿಸಿರಿ.**

ಇದು ೧೯೨೬ ರಿಂದ ಭಾರತದಲ್ಲಿ ಪ್ರಚಾರಕ್ಕೆ ಬಂದಿತು. ಈಗ ನಮ್ಮ ನೂತನ ರಾಜ್ಯ ಘಟನೆಯಂತೆ ಒಕ್ಕೂಟಕ್ಕೊಂದು ಮತ್ತು ಪ್ರತಿ ಘಟಕ ಸಂಸ್ಥಾನಗಳಿಗೊಂದರಂತೆ ಪ್ರತ್ಯೇಕ ಸಮಿತಿಗಳು ಹುಟ್ಟಿವೆ. ಕೆಲವು ಸಂಸ್ಥಾನಗಳು ಕೂಡಿಕೊಂಡು ಸಂಯುಕ್ತ ಲೋಕ ಸೇವಾ ಸಮಿತಿಗಳನ್ನು ಮಾಡಿಕೊಳ್ಳುವುದೂ ಇದೆ.

ಇಂತಹ ಸಂಯುಕ್ತ ಸಮಿತಿಗಳ ಹಾಗೂ ಒಕ್ಕೂಟ ಸಮಿತಿಯ ಸದಸ್ಯರನ್ನು ರಾಷ್ಟ್ರಾಧ್ಯಕ್ಷನೂ, ಘಟಕ ಸಂಸ್ಥಾನಗಳ ಸಮಿತಿಯ ಸದಸ್ಯರನ್ನು ರಾಜ ಪ್ರಮುಖನೊ, ಗವ್ಹರ್ನರನೊ ಆರಿಸಿಕೊಳ್ಳುತ್ತಾರೆ. ಇದರ ಸದಸ್ಯರು ಬಹಳ ಕುಶಾಗ್ರ ಬುದ್ಧಿಯುವರೂ ನಿಸ್ವಾರ್ಥಿಗಳೂ, ತಜ್ಞರೂ ಇದ್ದರೆನೇ ದೇಶದ ಕಾರ್ಯಭಾರಕ್ಕೆ ಸಹಕಾರ ದೊರೆಯುತ್ತದೆ. ಇದರಿಂದ ಅವರನ್ನು ಆರಿಸುವಾಗ ಕಡಿಮೆಯೆಂದರೆ ೧೦ ವರ್ಷವಾದರೂ ಸರಕಾರಿ ಸೇವೆಯನ್ನು

ಮಾಡಿದ್ದ ಜನರನ್ನೆ ಆರಿಸಬೇಕೆಂದು ನಿರ್ದಿಷ್ಟವಿದೆ. ೬ ವರ್ಷ ಅವರು ಸಮಿತಿಯಲ್ಲಿ ಉಳಿಯುವರು. ಸದಸ್ಯರಿಗೆ ನಿವೃತ್ತರಾಗಲು ೬೫ ವರ್ಷ ತುಂಬಬೇಕು. ಸದಸ್ಯರ ಆಕ್ಷೇಪಗಳು ವರಿಷ್ಠ ನ್ಯಾಯಾಲಯದಲ್ಲಿ ಒಪ್ಪಲ್ಪಟ್ಟರೆ ಅವರನ್ನು ಅಧ್ಯಕ್ಷನು ಅಧಿಕಾರದಿಂದ ಹೊರಹಾಕಬಹುದು. ಯಾವುದೇ ಸೇವಾ ಸಮಿತಿಯ ಸದಸ್ಯನಿಗೂ ಬೇರೆ ಯಾವುದೇ ನೌಕರಿ ಮಾಡಲು ಅಧಿಕಾರವಿಲ್ಲ. ಯಾವುದೇ ಸಮಿತಿಯ ಅಭಿಪ್ರಾಯವನ್ನು ಮಂತ್ರಿಮಂಡಲವು ಅಲಕ್ಷಿಸಲು ಶಾಸನ ಸಭೆಯೆದುರು ಕಾರಣ ಕೊಡಬೇಕು. ಇದರಿಂದ ಸಮಿತಿಗೆ ತನ್ನ ಕರ್ತವ್ಯದಲ್ಲಿ ಸ್ವಾತಂತ್ರ್ಯವಿರುವುದು.

**ಕರ್ತವ್ಯಗಳು :-** ದಿವಾಣೀ ಸೇವೆಗಾಗಿ ಅಧಿಕಾರಿಗಳನ್ನು ಆರಿಸುವುದು. ಮತ್ತು ಕಾರ್ಯಭಾರದ ಸಲಹೆ ಸೂಚನೆ ಕೊಡುವುದು. ಬೇರೆ ವಿಶೇಷ ಹುದ್ದೆಗಳಿಗೆ ನಿರ್ದಿಷ್ಟ ಪರೀಕ್ಷೆಗಳನ್ನಿಟ್ಟು ಯೋಗ್ಯರನ್ನು ಆರಿಸಿಕೊಳ್ಳುವುದು. ಅವರಲ್ಲಿ ಅಧಿಕಾರ ವಿತರಣ ಮಾಡುವುದು. ಅವರನ್ನು ವರ್ಗ ಮಾಡುವ, ಇಲ್ಲವೆ ಅವರ ಸ್ಥಳ ತುಂಬುವ ಸಮಸ್ಯೆಗಳನ್ನು ವಿಚಾರಿಸುವುದು. ತಮ್ಮ ಕೆಲಸಗಳ ಬಗ್ಗೆ ವಿಸ್ತಾರ ವರದಿಯನ್ನು ಮಂಡಿಸುವುದು. ಸರಕಾರಿ ನೌಕರರನ್ನು ಅವರ ಕರ್ತವ್ಯಚ್ಯುತಿಯ ಬಗ್ಗೆ ನ್ಯಾಯಾಲಯಕ್ಕೆ ತೀರ್ಪಿಗೆ ಗುರಿ ಮಾಡಿದರೆ ಅದಕ್ಕೆ ತಗಲುವ ಖರ್ಚು, ಹಾಗೂ ನೌಕರರಿಗೆ ಅವಘಡಗಳು ಸಂಭವಿಸಿದರೆ ಅದಕ್ಕೆ ಸಹಾಯ ನಿಧಿ, ಮೊದಲಾದ ಕುರಿತು ವಿಚಾರಿಸಿ ಯುಕ್ತಿಗಳನ್ನೂ, ಸೂಚನೆಗಳನ್ನೂ ಕೊಡುವುದು, ಸುವ್ಯವಸ್ಥೆ, ಶಿಸ್ತು, ರಕ್ಷಣೆಗಳ ಕುರಿತು ತನ್ನ ಉಪಾಯಗಳನು ಹೇಳುವುದು ಇತ್ಯಾದಿ....

## 73. How India is Governed? Explain its devided Groups and there administration. ಭಾರತವು ಹೇಗೆ ಆಳಲ್ಪಡುವುದು? ಅದರ ವಿಭಾಜಿತ ಗುಂಪುಗಳನ್ನೂ ಕಾರಭಾರವನ್ನೂ ಹೇಳಿರಿ.

ಭಾರತವು ಒಂದು ಸಾರ್ವಭೌಮ ಪ್ರಜಾಸತ್ತಾತ್ಮಕ ಸ್ವತಂತ್ರ ರಾಜ್ಯವಾಗಿದೆ. ಅದು ವಿವಿಧ ಘಟಕಗಳ ಸಂಹಿತಿಯಾಗಿದೆ. ವಿಶಿಷ್ಟ ಕಾರಭಾರಕ್ಕೆ ವಿಶಿಷ್ಟ ಖಾತೆಗಳೂ ಅಧಿಕಾರಿಗಳೂ ಇರುತ್ತಾರೆ. ಭಾರತವನ್ನು

ಅ, ಬ, ಕ, ಡ ಗುಂಪುಗಳೆಂದು ( A, B, C, D Groups ) ವಿಂಗಡಿಸಿದ್ದಾರೆ. ಅ ಮತ್ತು ಬ. ಗುಂಪುಗಳು ತಮ್ಮ ಕಾರ್ಯಭಾರವನ್ನು ತಾವೇ ಹೊರುತ್ತವೆ. ಕ. ಮತ್ತು ಡ. ಗುಂಪು ಕೇಂದ್ರದ ಅಧಿಕಾರ ವಿರುತ್ತವೆ.

೧. 'ಅ' ಗುಂಪು :— ಇದಕ್ಕೆ ಬಿಹಾರ, ಮಧ್ಯ ಪ್ರದೇಶ, ಸಂಯುಕ್ತ ಪ್ರಾಂತ, ಓಡಿಸ್ಸಾ, ಪೂರ್ವ ಪಂಜಾಬ, ಆಸಾಮು, ಮುಂಬೈ, ಮದ್ರಾಸ್, ಪಶ್ಚಿಮ ಬಂಗಾಲ ಮೊದಲಾದ ಘಟಕ ಸಂಸ್ಥಾನಗಳು ಸೇರುತ್ತವೆ. ಕಾರ್ಯ ಭಾರವನ್ನು ಸಾಗಿಸಲು ಗವರ್ನರ, ಮುಖ್ಯ ಮಂತ್ರಿ ಮಂತ್ರಿಮಂಡಲಗಳಿದ್ದು ಘಟಕ ಸಂಸ್ಥಾನಿ ಶಾಸನ ಮಂಡಲಗಳಿರುತ್ತವೆ. [ ಇವುಗಳ ಪ್ರತ್ಯೇಕ ಪ್ರತ್ಯೇಕ ವಿವರ ಹಿಂದೆ ಕೊಟ್ಟಿದೆ. ನೋಡಿರಿ. ]

೨. 'ಬ' ಗುಂಪು :— ಇದಕ್ಕೆ ಮೈಸೂರು, ಹೈದ್ರಾಬಾದ್, ಜಮ್ಮು, ಕಾಶ್ಮೀರ ಮಧ್ಯಭಾರತ, ಪತಿಯಾಲಾ ಪೂರ್ವಪಂಜಾಬ ಒಕ್ಕೂಟ, ಸೌರಾಷ್ಟ್ರ ರಾಜಸ್ಥಾನ ಕೋಚಿ, ತ್ರಾವಣಕೂರ್ ಮೊದಲಾದವು ಸೇರುತ್ತವೆ. ಇದರ ಕಾರ್ಯಭಾರ ಲಕ್ಷಣಗಳೂ "ಅ" ಗುಂಪಿನ ಲಕ್ಷಣಗಳಂತೆ ಇರುವದಾದರೂ ಗವರ್ನರ ಬದಲು ರಾಜ ಪ್ರಮುಖರಿರುವರು. ಮೈಸೂರನ್ನು ಳಿದು ಉಳಿದ ಸಂಸ್ಥಾಗಳಲ್ಲಿ ಒಂದೇ ಮನೆ ಇರುವುದು. ಇಷ್ಟೆ ಪ್ರಭೇದವೆನ್ನ-ಬಹದು.

೩. 'ಕ' ಗುಂಪು :— ಇದರಲ್ಲಿ ಹಿಮಾಚಲ ಪ್ರದೇಶ, ಕೊಡಗು ವಿಲಾಸಪುರಿ, ಅಜಮೀರ್, ಭೂಪಾಲ್, ದಿಲ್ಲಿ, ಮಣಿಪುರ, ತ್ರಿಪುರ, ಮತ್ತು ಕಚ್ಛಾ ಮೊದಲಾದವುಗಳು ಸಮಾವೇಶವಾಗಿವೆ. 'ಕ' ವಿಭಾಗದ ಸಂಸ್ಥಾನಗಳು ಕೇಂದ್ರದಾಡಳಿತೆಗೆ ಅಧೀನವಾಗಿದ್ದು ಅಧ್ಯಕ್ಷನಿಂದ ನೇ.ಮ.ಕವಾದ ಚೀಫ್‌ಕಮಿಶನರೊ, ಲೆಫ್ಟನಂಟ್ ಗವರ್ನರರೊ ಇರುತ್ತಾರೆ. ನ್ಯಾಯ ಶಾಖೆ, ಮಂತ್ರಿಮಂಡಲ ಮೊದಲಾದವುಗಳೆಲ್ಲ 'ಅ' ಗುಂಪಿನಂತೆಯೆ.

೪. 'ಡ' ಗುಂಪು :— ಇದಕ್ಕೆ ಅಂದಮಾನ ಮತ್ತು ನಿಕೋಬಾ ನಡುಗಡ್ಡೆಗಳು, ಇನ್ನು ಮುಂದೆ ದೊರೆಯುವ ಪ್ರದೇಶಗಳು ಮತ್ತು ಅ, ಬ, ಕ ಗುಂಪಿಗೆ ಸೇರದೆ ಉಳಿದ ಪ್ರದೇಶಗಳೂ ಕೂಡುತ್ತವೆ. ಇದರ ಸಂಸ್ಥಾನಗಳಾದರೂ ಕೇಂದ್ರಕ್ಕೆ ಅಧೀನವಾಗಿದ್ದು ಅಧ್ಯಕ್ಷನಿಂದ ನೇಮಕವಾದ

ವಕೀಲನೂ, ಚೀಫ್ ಕಮೀಶನರೂ ಇರುತ್ತಾರೆ. ಈ ಪ್ರದೇಶಗಳ ಹೆಚ್ಚಿನ ಮೇಲ್ವಿಚಾರಣೆ ಹೊಣೆಗಾರಿಕೆ ಅಧ್ಯಕ್ಷನನ್ನೆ ಅವಲಂಬಿಸಿದೆ.

74. Write short notes on : 1) Union list, 2) State list 3) Concurrent list 4) Residuory 5) Election Commission. ಟಿಪ್ಪಣಿ ಬರೆಯಿರಿ.

೧. ಒಕ್ಕೂಟದ ಪಟ್ಟಿ :– ಈ ಪಟ್ಟಿಯಲ್ಲಿ ದೇಶದ ಸಂರಕ್ಷಣೆ, ಯುದ್ಧ ವಿಚಾರ, ಅಂಚೇ ಖಾತೆ ಮೊದಲಾದವುಗಳನ್ನೊಳಗೊಂಡ ೯೭ ಅಧಿಕಾರಗಳ ವಿತರಣೆಯು ಉಲ್ಲೇಖವಿರುತ್ತದೆ. ಇದರಲ್ಲಿ ನಮೂದಿಸಲಾದ ಸಮಸ್ಯೆಗಳೆಲ್ಲ ಅಖಿಲ ಭಾರತಕ್ಕೆ ಸಂಬಂಧಿಸಿದವು. ಇದರ ಬಗ್ಗೆ ಎಲ್ಲ ಕಾಯ್ದೆ ಕಾನೂನುಗಳನ್ನು ಪಾರ್ಲಿಮೆಂಟೇ ಮಾಡುವುದು.

೨. ಸಂಸ್ಥಾನೀ ಪಟ್ಟಿ :– ಇದರಲ್ಲಿ ಘಟಕ ಸಂಸ್ಥಾನಗಳಿಗೆ ಸಂಬಂಧಿಸಿದ ಶಿಕ್ಷಣ, ಪೋಲೀಸ್ ಖಾತೆ, ಒಕ್ಕಲುತನ, ಸ್ಥಾನಿಕ ಸಂಸ್ಥೆಗಳ ವಿಭಾಗ ಮೊದಲಾವುಗಳನ್ನೊಳಗೊಂಡ ೬೬ ವಿಷಯಗಳ ಉಲ್ಲೇಖವಿದ್ದು ಘಟಕ ಸಂಸ್ಥಾನಗಳೇ ಆ ಬಗ್ಗೆ ಯೋಗ್ಯ ಕಾನೂನುಗಳನ್ನು ಮಾಡಿಕೊಳ್ಳುತ್ತವೆ.

೩. ಸಂಯೋಜಿತ ಪಟ್ಟಿ :– ಇದರಲ್ಲಿ ನಮೂದಿಸಲಾಗುವ ವಿಷಯಗಳು ಘಟಕ ಸಂಸ್ಥಾನಗಳಿಗೆ ಸಂಬಂಧಿಸಿದವಾದರೂ ಅಖಿಲ ಭಾರತದಲ್ಲೆಲ್ಲ ಏಕ ರೀತಿಯ ಕಾಯ್ದೆ ಕಾನೂನುಗಳಿರಬೇಕಾದ ಬ್ಯಾಂಕ್, ಯಾಂತ್ರಿಕ ಶಾಲೆ, ಫೌಜದಾರಿ ವಿಷಯ ಮೊದಲಾದ ಆವಶ್ಯಕ ೪೭ ವಿಷಯಗಳನ್ನೊಳಗೊಂಡ ವಿಷಯಗಳು ಅಡಕವಾಗಿವೆ. ಇದರ ಕುರಿತು ಯಾವುದೇ ಕಾಯ್ದೆ ಕಾನೂನು ಮಾಡಲು ಒಕ್ಕೂಟ ಮತ್ತು ಘಟಕ ಸಂಸ್ಥಾನಗಳೆರಡಕ್ಕೂ ಅಧಿಕಾರವಿದೆ. ( ಆದರೆ ಒಕ್ಕೂಟ ಮತ್ತು ಸಂಸ್ಥಾನಗಳ ಕಾಯ್ದೆಗಳಲ್ಲಿ ಭೇದ ಹುಟ್ಟಿದರೆ ಒಕ್ಕೂಟದ ಕಾಯ್ದೆಗೆ ಪ್ರಾಧಾನ್ಯ ಕೊಡಲಾಗುವುದು. )

೪. ಶೇಷ ಪಟ್ಟಿ :– ಸರಕಾರವು ಮೇಲಿನ ಮೂರು ಪಟ್ಟಿಗಳಲ್ಲೂ ಸೇರದೆ ಉಳಿಯುವ, ಅಥವಾ ಹೊಸದಾಗಿ ಹುಟ್ಟಿಕೊಳ್ಳುವ ಇತರ ವಿಷಯಗಳ ಬಗ್ಗೆ ಈ ಶೇಷ ಪಟ್ಟಿಗಳಿರುತ್ತವೆ ಇದರ ವಿಷಯದಲ್ಲಿ ಕಾಯ್ದೆ ಮಾಡುವ ಮೊದಲಾದ ಅಧಿಕಾರವೆಲ್ಲ ಪಾರ್ಲಿಮೆಂಟಿಗೇ ಇರುತ್ತದೆ.

೫. ಚುನಾವಣೆ ಸಮಿತಿ :– ಪ್ರಾಂತಿಕ ಶಾಸನ ಮಂಡಲದ ಮತ್ತು ಶಾಸನ ಸಭೆಗಳ ಚುನಾವಣೆಗಳಿಗೆ ಮತದಾರರ ಪಟ್ಟಿಗಳನ್ನು ತಯಾರಿಸಿ, ಚುನಾವಣೆ ನಡೆಸುವ ಸಲುವಾಗಿಯೆ ಒಂದು ಸಮಿತಿಯಿರುವುದು. ಇದರಲ್ಲಿ ಒಬ್ಬ ನಿರ್ದೇಶಕನೂ ಇತರ ನಿರ್ದೇಶಕರೂ ಇದ್ದು ಅವರನ್ನು ರಾಷ್ಟ್ರಾಧ್ಯಕ್ಷನು ನಿಯಮಿಸುತ್ತಾನೆ. ಇವರನ್ನು ಯೋಗ್ಯ ಕಾರಣವಿಲ್ಲದೆ ಅಧಿಕಾರದಿಂದ ತಳ್ಳಲು ಬರುವುದಿಲ್ಲ.

**75. Explain the rights of Indian citizens (as Indian new constitution) ನೂತನ ರಾಜ್ಯಘಟನೆಯಲ್ಲಿ ವಿವರಿಸಿದ ಭಾರತದ ನಾಗರಿಕರ ಹಕ್ಕುಗಳನ್ನು ವಿವರಿಸಿರಿ.**

೧. ಭಾರತದಲ್ಲಿನ ಎಲ್ಲ ವ್ಯಕ್ತಿಗಳಿಗೂ ಕಾಯಿದೆ ಮತ್ತು ನ್ಯಾಯವನ್ನು ಸರಿಸಮಾನವಾಗಿ ಹೇರಲಾಗುವುದು.

೨. ಯಾವುದೇ ಗೃಹಗಳಿಗೆ, ಸಾರ್ವಜನಿಕ ಮಂದಿರಗಳಿಗೆ ಅಥವಾ ಇನ್ನಿತರ ಸ್ಥಳಗಳಿಗೆ ಪ್ರವೇಶಿಸಲು ಎಲ್ಲರಿಗೂ ಸಮಾನ ಹಕ್ಕಿದೆ. ಜಾತಿ ಮತ ಲಿಂಗ ಭೇದವಿಲ್ಲ.

೩. ಸರಕಾರದ ನೌಕರಿಯೂ ಯಾವುದೇ ಭೇದಭಾವವಿಲ್ಲದೆ ಯಾರಿಗೂ ದೊರೆಯಬಹುದು.

೪. ಸರಕಾರವು ಕೆಲ ವಿಶಿಷ್ಟ ಬಿರುದುಗಳನ್ನು ನೀಡಬಹುದು. ಆದರೆ ಪರದೇಶ ಬಿರುದುಗಳನ್ನು ಭಾರತದ ನಾಗರಿಕನು ಸ್ವೀಕರಿಸಬಾರದು.

೫. ಅಸ್ಪೃಶ್ಯತೆ ನಿರ್ಮೂಲನಗೊಳಿಸಲಾಗಿದೆ.

೬. ಪ್ರತಿಯೊಬ್ಬನಿಗೂ ಧರ್ಮ, ಸಾಂಸ್ಕೃತಿಕ, ಶೈಕ್ಷಣಿಕ, ಆಸ್ತಿಯ, ಸಮಾನತೆಯ, ಸ್ವಾತಂತ್ರ್ಯತೆಯ ಹಕ್ಕುಗಳಿವೆ. ಅಲ್ಲದೆ ಭಾಷಣ ಮಾಡುವ, ಶಸ್ತ್ರಗಳಿಲ್ಲದೆ ಶಾಂತವಾಗಿ ಒಂದೆಡೆ ಸೇರುವುದಕ್ಕೆ, ಸಂಘ ಸಂಸ್ಥೆಗಳ ರಚನೆಗೆ, ಭಾರತ ಕ್ಷೇತ್ರದಲ್ಲೆಲ್ಲೂ ಸಂಚರಿಸಲಿಕ್ಕೆ, ಯಾವುದೇ ಕೆಲಸ, ವ್ಯವಹಾರ ಮಾಡಲಿಕ್ಕೆ, ಆಸ್ತಿ ಸಂಪಾದಿಸಿ, ವಿಕ್ರಯಿಸಿ ಇಲ್ಲವೆ ಇಟ್ಟುಕೊಳ್ಳಲು ಎಲ್ಲರಿಗೂ ಹಕ್ಕಿದೆ.

76. Write five sentences on : 1) Quorum. 2) Auditor General of India. 3) Attorney Genreal of India. 4) All India congress. 5) Regulating Act. 6) Simon commission. 7) Cripp's offer. 8) Queen's proclamation. 9) Pitt's India Act. 10) Act of 1853. 11) Charter Act. 12) Act of 1858 13) Government of India Act of 1919 14) Poona pact. 15) Communal award. 16) Quit India. ಐದೈದು ವಾಕ್ಯ ಬರೆಯಿರಿ.

೧. ಮತಪಟ್ಟಿ :– ಶಾಸನ ಮೊದಲಾದ ಸರಕಾರಿ ಸಭೆಗಳ ಅಧಿವೇಶನದಲ್ಲಿ ಕಾರ್ಯಕಲಾಪಗಳು ಸಾಂಗವಾಗಬೇಕಾದರೆ ಆ ಸಭೆಯಲ್ಲಿರಬೇಕಾಗಿದ್ದ ಒಟ್ಟು ಸದಸ್ಯರ ೧೦% ದಷ್ಟಾದರೂ ಜನ ಹಾಜರಿರಬೇಕೆಂಬ ನಿಯಮವಿದೆ. ಅಂದರೆನೇ ಸಭೆ ನಡೆಯುವುದು. ಇಲ್ಲದಿದ್ದರೆ ಮುಂದೂಡಬೇಕಾಗುತ್ತೆ.

೨. ಭಾರತದ ಮಹಾ ಲೆಕ್ಕ ಪರೀಕ್ಷಕ :– ಇವನನ್ನು ರಾಷ್ಟ್ರಾಧ್ಯಕ್ಷನು ನೇಮಿಸುವನು. ರಾಷ್ಟ್ರಾಧ್ಯಕ್ಷನು ನಿರ್ದಿಷ್ಟ ಪಡಿಸಿದಂತೆ ಒಕ್ಕೂಟ ಹಾಗೂ ಪ್ರಾಂತಗಳ ಲೆಕ್ಕಪತ್ರಗಳನ್ನಿಡಬೇಕು. ಒಕ್ಕೂಟದ ಲೆಕ್ಕಗಳಿಗೆ ಸಂಬಂಧಿಸಿದ ವರದಿಗಳನ್ನು ರಾಷ್ಟ್ರಾಧ್ಯಕ್ಷನಿಗೂ ಪ್ರಾಂತೀಯ ವರದಿಗಳನ್ನು ಗವರ್ನರ ಇಲ್ಲವೆ ರಾಜಪ್ರಮುಖರಿಗೂ ನಿವೇದಿಸಬೇಕು. ಇವನ ವೇತನವನ್ನು ಶಾಸನ ಸಭೆ ನಿರ್ಣಯಿಸುತ್ತದೆ.

೩. ಭಾರತದ ಮಹಾ ಪ್ರತಿಭುವ :– ನ್ಯಾಯ ಮಂಡಲಕ್ಕೆ ನ್ಯಾಯಮೂರ್ತಿಯಾಗಲು ತಕ್ಕವನಾದವನನ್ನು ರಾಷ್ಟ್ರಾಧ್ಯಕ್ಷನು ಮಹಾ ಪ್ರತಿಭುವನೆಂದು ನೇಮಿಸುವನು. ಇವನು ರಾಷ್ಟ್ರಾಧ್ಯಕ್ಷನು ಆಗಾಗ ಕೇಳುವ ಸಲಹೆಗಳಿಗೆ ಆವನ ಅಭಿಪ್ರಾಯಗಳ ಬಗ್ಗೆ ಸರಕಾರಕ್ಕೆ ನಿವೇದನೆ ಕೊಡುವನು. ಅದಕ್ಕಾಗಿ ಆವನು ಭಾರತ ಕ್ಷೇತ್ರದೊಳಗಿನ ಯಾವುದೇ ನ್ಯಾಯಾಲಯದಲ್ಲಿ ಹಾಜರಿರಬಹುದು.

ವಿ. ಸೂ :- ಉಳಿದ ಉತ್ತರಗಳಿಗೆ ಯಾವುದಾದರೊಂದು ನೂತನ ಭಾರತ ಇತಿಹಾಸ ( New Indian History. ) ವನ್ನು ನೋಡಿರಿ. ಅಭ್ಯಾಸ ಪತ್ರಿಕೆಯಲ್ಲಿ ಈ ವಿಷಯಗಳಿಗೆ ಮಹತ್ವವಿಲ್ಲವಾದರೂ ಅವುಗಳ ಮೇಲಿಂದ ಪ್ರಶ್ನೆಗಳು ಬರಲೂಬಹುದು ಅವುಗಳ ಮೇಲ್ಪರಿಚಯ ಮಾಡಿಕೊಳ್ಳಿರಿ.

## ★ GENERAL HINTS.

**Question Paper** :- It may not have section. It will have about 10 to 12 Questions out of which you will have to answer about 8 to 10 Questions. Some of them may be compulsory. Each question will carry about 12 marks. Total marks 100. 3 hours paper.

**Types of Questions** :- 1) Explain certain statements. 2) Discribe the composition, Powers and functions of. 3) Distinguish between two matters. 4) Write short notes on. 5) Give an idea of. 6) Examine chief characteristics of. 7) Write some significant sentences on. 8) Write five sentences on. 9) Bring out the advantages and disadvantages of. 10) Elusidate the truth of. 11) Comment on. 12) Give a short account of. 13) Define certain matters. 19) Differentiate between. Etc. Etc



# ★ MODEL QUESTIONS.

( Including B. U, S. L C & S S C likely Questions from 1936 up to 1951 )

1. Discuss the meaning and the scope of Civics. what is the importance of its study? What is its subject matter?

2 Give an idea of the structure of a state Legislature.

3. What is a state? How is the Governor of a state appointed? What are his powers and functions?

4. Distinguish between a citizen and an Alien. What are the duties and rights of a citizen towards his family, the society and the nation?

5. Write short notes on: 1) Constituent Assembly. 2) Village Panchayats 3) Queen's Proclamation. 4) Diarchy in provinces. 5) Matriarchal family. 6) Act of 1935. 7) Cripp's offer. 8) Patriarchal family. 9) Vote. 10) Simon commission. 11) Election 12) Adult Franchise 13) Responsibility of a Voter 14) Election commission. 15) All India Congress. 16) Public opinion 17) Minorities. 18) Voter and vote. 19) The Instrument of Assession. 20) Lists and their forms. 21) The Cabinet system. 22) Regulating Act. 23 Morely minto Reforms. 24) Political parties. 25) Reserve Bank.

26) Supreme Court. 27) Provincial Autonomy. 28) Electorate. 29) The Budget. 30) Indian act of Independence 1947. 31) Importance of a Voter's vote. 32) Attorney General of India. 33) Quorum. 34) Auditor General of India. 35) Jury system.

6. Describe the Composition of the Upper House in Bombay state.

7. State the appointment, functions and powers of the President of the Indian union. What are his special or emergency powers ?

8. What are the ordinary and special powers of the Governer of a state? How he is appointed ?

9. What are the causes of the break up of the Joint Family ? what are its advantages.

10. Define Law and state how it is made ?

11. Trace the Growth and the development of the Cantral Executive of India.

12. Describe Carefully how Civil and Criminal Justice is administered in India ?

13. Write what you know about the administrative services of India.

14. Explain the provincial Legislature.

15. Enumarate the organs of the Government. Explain their functions and powers.

16. Describe the appointment and the Working of the cabinet of the Indian union

17. What are the defects of the present caste system? How should those be removed?

18. Trace the growth and the development of the central Legislature

19. What is the meaning of the citizen ship? What are its implications?

20. What are the sources of income and heads of expenditure of the Indian union, or of the Bombay state, or of a state.

21. How does the Legislature exercise control over the Executive?

22. Distinguish between Tribe, caste, and Community? What are the features of the caste system in India?

23. Describe the organisation and the functions, income and expenditure of the District Local Boards, Village Panchayats and Municipalities. What are their chief drawbacks?

24. Explain the machinary for the administration of Criminal Justice in the District How far do you consider its satisfactory?

25. Describe how a bill becomes law in the provincial Legislature?

26. Describe the composition of the central Executive and explain the method of its work.

27. What is right? what is the relation between rights and duty?

28. Distinguish between society and state. Discuss their relation to each other.

29. What are the functions of the Family? Describe its various forms.

30. Is the Joint family system suited to present Indian conditions? why?

31. Distinguish between caste and class or what is caste? what are its evils and how can those be remedied?

32. What are the causes of the break up of the Joint Family? What are its advantages.

33. Define Law and state how it is made?

34. What is unitary form of Government? what are its merits and drawbacks?

35. Mention the powers, duties and appointment of the District collector.

36. Give a short account of the District Administration in India

37. Describe the roll of a citizen in a democratic state.

38. What is the importance of Local self Government?

39. What is Federation or Democracy? Give its merits and drawbacks?

**40.** Write some significant Sentences on : 1) The Bicameral system of Legislature. 2) Separation of powers. 3) Qualities of a good citzen. 4) Residuary powers. 5) Private property. 6) Freedom of the press. 7) Marriage. 8) Family 9) Indirect and dircet elections 10) Ordinence.

**41. Comments on** :- 1) "Rights imply duties" 2) "Family is a training Ground of civic virtues" 3) "Man is both a product and a factor of society."

**42.** How is House of People elected? What are the rights and disabilities of its members?

**43.** State the working, powers, and functions of the House of People.

**44.** How does the House of People control the cabinet?

**45.** Compare the working of the presidential and the cabinet forms of the Govt. What are their essential features?

**46.** Draw up a scheme of the duties and rights of which a citizen should normaly enjoy?

**47.** What changes has the family undergone now? Do you think it will break down as a social unit?

**48.** By what forces and in what way is the basis of the caste system weakened in India to day? Will you advocate its total abolition?

49. State the various forms of the marriages and explain which is the good form?

50. What do you understand by the Local self Government? Write explantary notes on its functions and bodies.

51. What are the advantages of Group life?

52. Describe the nature and functions of social Institutions.

53. What changes has the family undergone now? do you think it will break down as a social unit?

54. By what forces and in what way is the basis of the caste system weakened in India to day? will you advocate its total abolition?

55. Discuss why the local self government has failed in India?

56. Indicate the importance of Local self Government in the training for citizen ship.

57. What are the essential conditions for the success of Democracy? To what extent are these conditions presnet in India? What are its limitations.

58. What do you understand by a nation? is India a nation?

59. Define state and its administration.

60 What is a responsible. Government? How does it work? what are the conditions necessary for its Successful working?

61. How did the Family originate? What part does it play to day in the training for citizen ship and the organization of economic life?

62. How would you Classify the forms of the Government? Discuss Their advantages and dis-advantages.

63. Write some sentences: 1) Our present Constitution. 2) Indian Army. 3) Individual property

64. How is Citizenship aquired and lost?

# ★ ANSWERS.

( ಮಾದರಿಯ ಪ್ರಶ್ನೆಗಳಿಗೆ ಕೂಡಲಿ ಉತ್ತರಗಳನ್ನು ಕಂಡು ಹಿಡಿಯಲು ಅನುಕೂಲವಾಗುವಂತೆ ಈ ವಿಭಾಗ ಮಾಡಲಾಗಿದೆ. ಜೊತೆಗಿರುವ ಸಂಖ್ಯೆಗಳು ಆ ವಿಷಯಗಳಿರುವ ಪುಟಸಂಖ್ಯೆ ಸೂಚಿಸುತ್ತವೆ. )


**A**

Allien 17
Airstocracy 21
Assessors 34
Act of 1935 36
Army 57
Air Force 58
Additional Judge 63
Appeal courts 66
Administrative services 67
All India service 67
Attorney General 73
Auditor General 73

**B**

Bicameral Legislature 32
Billb ecomes Law 52
Budget 54
Bench Court 65

**C**

Civics & Sciences 1
Class 8
Caste 8
Caste System 8
Community 11
Clan 11
* Citizen 13
* Citizen Ship 13
Custom 20
Constitution 20
Constituent Assembly 39
* Central Executive 40
Control of Local bodies 47
* Cabinet System 50
Council of States 51
Casting Vote 53
Consolidated funds 60
Civil Justice 61
Courts of Wards 65

**D**

Defination of Civics 1
* Duties of Citizen 16
Diarchy in Provinces 37

District Administration 41
* Democracy 22
Direct Electon 29
Defence of India 57
District Court 63
Development of Legislature 41
* Dictator Ship 23

E

* Election Commission 72
* Expenditure of Union 59
* Expenditure of State 59
Endogamy 7
Evolution of Property 18
* Electorate 29
Exogomy 7
* Election 29

F

Family 3
Functions of the Family 3
Future of the Family 3
Future of Property 18
* Forms of Govrnment 21
Forms of Citizen ship 14
Future of Caste 10
* Federation 37
Forms of Property 19
Family & Property 19
Future of Democracy 27
Functions of Govt. 31
Funds of India 60
* Franchise 30

G

Government 31
Good Government 26
Governer 56

H

House of People 51
Home Guards 58
High Court 62
How India Governed 69

I

Importance of Marriage 7
Indirect Election 29
* Importance of Vote 29
Instrument of Accession 37
Independence Act 1947 38
* Income of Union 59
Impeachment 66
Interstate Council 67
* Income of State 59

J

Joint Family 4
Judiciary 32
Juror 34
Joint Judge 63

## L

Legislature (Development) 41
Local Self Government 43
Local Board 46
Law 20
* Legislature 32
* Legislative Assembly 54
* Legislative Council 54

## M

Morality 20
* Monarchy 21
* Modern Govt. 23
Modern Family 4
Marriage 6
Minorities 33
Morely Minto Reforms 35
Mont-ford Reforms 35
Municipality 45
Military Court 65
Magistrate Court 65

## N

Nation 12
News Paper 27
Navey 57
N. C. C. 58
* New Constitution 72

## O

Orgnns of Govt. 31
Ordinence 50

## P

Parties 27
Public Opinion 27
Present Caste system 9
Property 18
Private Proporty 18
Provincial Autonomy 36
* President of India 49
* Presidents Powers 47
Primeminister 52
Provincial Cabinet 53
Public Account 60
Public Service 68

## Q

Quorum 73

## R

Residuary 71
Reserve Bank 66
Revenue Courts 64
Rights of Property 19

## S

Separation of Judiciary 66
State List 71

* Study of Civics 2
Society and state 11
Seperation of Powers 34
State Primier 53
Social Law 20
* State Legislature 54
* State bill becomes law 55
Supreme Court 61
Small Causes Court 64
State Service 68

T

Types of Family 5
Types Of Marriage 6
Tribe
Territorial Force
Town Civil Court
Town Criminal Court

U

* Union Legislatu[illegible]
Union List
Union Services
Untouchability
* Unitary Govt,

V

Village Punchayats
Vice President


---

* ಈ ಗುರ್ತು ಹಾಕಿದ ವಿಷಯಗಳು ಇಂಗ್ಲಿಷ್ X ನೇ ಇಯತ್ತೆಯ ಅಭ್ಯಾಸ ಪತ್ರಿಕೆಗೆ ಅನುಸರಿಸಿವೆ.